ಆದ್ದರಿಂದ ಸದರಿ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) (ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ರವರ ಉಲ್ಲೇಖಿತ ಪತ್ರದನ್ವಯ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಅಸ್ತಿತ್ವದಲ್ಲಿಲ್ಲದ ಕಾರಣ ಹಾಗೂ ಸಂಘದ ಸದಸ್ಯರುಗಳಿಂದಾಗಲೀ ಸಾರ್ವಜನಿಕರುಗಳಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲದ ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ ಈ ಕೆಳಕಂಡಂತೆ ಆದೇಶ ನೀಡಿದೆ.

**ಆದೇಶ**

**ಸಂಖ್ಯೆ : ಡಿಆರ್‌ಟಿ/ಎಲ್‌ಕ್ಯೂಡಿ/ಸಿಆರ್–63/2011–12, ದಿನಾಂಕ : 29–2–2012.**

ಶ್ರೀ ಆರ್. ಲೋಕೇಶ್, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ/139/ಸಿಎಲ್ಎಂ./2010, ದಿನಾಂಕ : 17–2–2011 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಟಿ.ವಿ.ಎಸ್.ಇ. ಸರ್ವೀಸಸ್ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ತುಮಕೂರು. ಇದನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ತುಮಕೂರು ತಾಲ್ಲೂಕು, ಇವರನ್ನು ಸಂಘದ ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ. ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣ ಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಅಧ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತೆಯ ಮೇರೆಗೆ ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ : 29–2–2012 ರಂದು ನೀಡಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು**

**ಪಿ.ಆರ್. 389** ತುಮಕೂರು ಜಿಲ್ಲೆ, ತುಮಕೂರು

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬಹುಮಹಡಿ ಕಟ್ಟಡ, ಬೆಂಗಳೂರು–560 001.

**ಅಧಿಸೂಚನೆ**

2011–12ನೇ ಸಾಲಿನ ವಾರ್ಷಿಕ ದಾಸ್ತಾನು ಪರಿಶೀಲನೆಯ ಪ್ರಯುಕ್ತ ಬೆಂಗಳೂರಿನಲ್ಲಿರುವ ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆಯಲ್ಲಿ ದಿನಾಂಕ : 16–4–2012 ರಿಂದ ದಿನಾಂಕ : 21–4–2012ರವರೆಗೆ ಎಲ್ಲಾ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ಕಛೇರಿಗಳಿಗೆ ಪುಸ್ತಕ ಮತ್ತು ಪ್ರಕಟಣೆಗಳ ಮಾರಾಟವನ್ನು ನಿಲ್ಲಿಸಲಾಗುತ್ತಿದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಎಂ. ರವಿಶಂಕರ್**

ನಿರ್ದೇಶಕರು.

## OFFICE OF THE DIRECTOR OF PRINTING, STATIONERY AND PUBLICATION, GOVERNMENT CENTRAL BOOK DEPOT, M.S. BUILDING, BANGALORE-560 001.

**NOTIFICATION**

It is hereby notified for the Information of all Public and Government Office that there will be no sales of Books & Publication from the Government Book Depot, Bangalore from 16-4-2012 to 21-4-2012 (both days inclusive) on Account of Annual Stock verification for the year 2011-12.

**M. RAVISHANKAR.**

**P.R. No. 390** Director.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ.**

**ಸಾರ್ವಜನಿಕ ಪ್ರಕಟಣೆ**

**ಸಂಖ್ಯೆ : ಎಲ್‌ಎನ್‌ಡಿಸಿಆರ್ : 1100/11–12, ಕೆ.ಆರ್. ಪುರ ದಿನಾಂಕ : 13–3–2012.**

**ನಮೂನೆ–27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕರ ಹಳ್ಳ ಮತ್ತು ಬಂಡಿದಾರಿ 'ಬ' ಖರಾಬು 1–07 ಎ.ಗುಂ. ಜಮೀನಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಹಳ್ಳ ಮತ್ತು ಬಂಡಿದಾರಿ 'ಬ' ಖರಾಬು 1–07 ಎ.ಗುಂ. ಜಮೀನಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಹಳ್ಳ ಮತ್ತು ಬಂಡಿದಾರಿ 'ಬ' ಖರಾಬು 1–07 ಎ.ಗುಂ. ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಹಿತಾಸಕ್ತಿ ಹಕ್ಕಿನ ಜೊತೆಗೆ ಸದರಿ ಭಾಗವು ಸದರಿ ಭಾಗದಲ್ಲೆ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | ಕ್ಯಾಲಸನಹಳ್ಳಿ ಗ್ರಾಮ, ಕೆ.ಆರ್.ಪುರ ಹೋಬಳಿ |
| ತಾಲ್ಲೂಕು | ಬೆಂಗಳೂರು ಪೂರ್ವ ತಾಲ್ಲೂಕು |
| ಜಿಲ್ಲೆ | ಬೆಂಗಳೂರು ಜಿಲ್ಲೆ |
| ಸರ್ವೆ ನಂಬರ್ | ಸ.ನಂ. 19 ರಲ್ಲಿ 1–07 ಎ.ಗುಂ. |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | ಹಳ್ಳ ಮತ್ತು ಬಂಡಿದಾರಿ 'ಬ' ಖರಾಬು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | 1–07 ಎ.ಗುಂ. |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ ದಾರಿ ಅಥವಾ ಅದರ ಭಾಗ | ಕ್ಯಾಲಸನಹಳ್ಳಿ ಗ್ರಾಮ |

**ತಹಶೀಲ್ದಾರ್,**

**ಪಿ.ಆರ್. ನಂ. 391** ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ.

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ.**

**ಸಾರ್ವಜನಿಕ ಪ್ರಕಟಣೆ**

**ಸಂಖ್ಯೆ : ಎಲ್‌ಎನ್‌ಡಿಸಿಆರ್ : 1203/11–12, ಕೆ.ಆರ್. ಪುರ, ದಿನಾಂಕ : 13–3–2012.**

**ನಮೂನೆ–27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ 'ಬ' ಖರಾಬು 0–15 ಜಮೀನಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ 'ಬ' ಖರಾಬು 0–15 ಗುಂಟೆ ಜಮೀನಿನ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ 'ಬ' ಖರಾಬು 0–15 ಗುಂಟೆ ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

2. ಸಾರ್ವಜನಿಕ ಹಿತಾಸಕ್ತಿ ಹಕ್ಕಿನ ಜೊತೆಗೆ ಸದರಿ ಭಾಗವು ಸದರಿ ಭಾಗದಲ್ಲೆ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನದೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | ಕ್ಯಾಲಸನಹಳ್ಳಿ ಗ್ರಾಮ, ಕೆ.ಆರ್.ಪುರ ಹೋಬಳಿ |
| ತಾಲ್ಲೂಕು | ಬೆಂಗಳೂರು ಪೂರ್ವ ತಾಲ್ಲೂಕು |
| ಜಿಲ್ಲೆ | ಬೆಂಗಳೂರು ಜಿಲ್ಲೆ |
| ಸರ್ವೆ ನಂಬರ್ | ಸ.ನಂ. 88 ರಲ್ಲಿ 0–15 ಗುಂಟೆ |
| ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | 'ಬ' ಖರಾಬು |
| ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | ಒಟ್ಟು 0–15 ಗುಂಟೆ |
| ಸಾರ್ವಜನಿಕ ರಸ್ತೆ/ ಬೀದಿ/ ಗಲ್ಲಿ/ ದಾರಿ ಅಥವಾ ಅದರ ಭಾಗ | ಕ್ಯಾಲಸನಹಳ್ಳಿ ಗ್ರಾಮ |

**ತಹಶೀಲ್ದಾರ್,**

**ಪಿ.ಆರ್. ನಂ. 392** ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ.

## PANCHAJANYA VIDYA PEETHA WELFARE TRUST (REGD)

**1st N Block, Rajajinagar, Bangalore-560 010 Branch Office : Dr. A.I.T. Campus, Mallathahalli, Bangalore-560 056.**

| | | |
|---|---|---|
| **Sri P.L. Nanjundaswamy, B.E. M.S.E. (USA)** | **Sri S. Shivamallu, B.E. FIE** | **Dr. M. Mahadeva, Ph.D.** |
| Chairman | Managing Trustee/Secretary | Treasurer |

### NOTIFICATION

### Ref No. PVP/WFT/219/2011-12, dated 8th February 2012

In accordance with section 5(1) of the Right to information Act, the names & other details of SPIO, APIO & FAA are hereby published for kind information of the General Public and others concerned in respect of Dr. Ambedkar Institute of Technology, Outer Ring Road, Near Janan Bhatathi Campus, Mallathahalli, Bangalore-56.

| | |
|---|---|
| **1. State Public Information Officer (SPIO)**<br>Sri K.R. Krishnamurthy, Asst. Administrative Officer,<br>Dr. Ambedkar Institute of Technology,<br>Bangalore-560 056 Ph : 23218534 | **2. Assistant Public Information Officer**<br>Sri B.B. Mahesh Kumar, Legal Assistant,<br>Panchayanya Vidhyaa Peetha Welfare Trust,<br>Mallathahalli, Bangalore-560 056. Ph : 9449668281. |
| **3. First Appellate Authority**<br>Sri Shivamallu S. Secretary/Managing Trustee,<br>Panchajanya Vidhyaa Peetha Welfare Trust,<br>Mallathahalli, Bangalore-560 056. Ph : 23215070 | |

**P.D. 44** Secretary/Managing Trustee

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು

**ಅಧಿಸೂಚನೆ**

**ಸಂಖ್ಯೆ : ಎಲ್‌ಎನ್‌ಡಿ(ಎನ್)/ಸಿಆರ್/71/11–12, ದಿನಾಂಕ : 27–2–2012**

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಹೊಸಹಳ್ಳಿ ಗ್ರಾಮದ ಸರ್ವೆ ನಂ. 24/1, 24/2, 24/3 ರಲ್ಲಿ 0–03 ಗುಂಟೆ ಕಾಲು ದಾರಿ ಜುಮ್ಲಾ 0–03 ಕಾಲು ದಾರಿ ಬಿ ಖರಾಬ್ ಜಮೀನನ್ನು ಕಾಯಂ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂ. ಆರ್‌ಡಿ/602/ಎಲ್‌ಜಿಬಿ/2011, ದಿನಾಂಕ : 8–1–2012.
2. ಜಿಲ್ಲಾಧಿಕಾರಿಗಳ ಪತ್ರದ ಸಂಖ್ಯೆ : ಎಲ್‌ಎನ್‌ಡಿ(ಎಸ್)ಸಿಆರ್/127/11–12, ದಿನಾಂಕ : 31–1–2012.
3. ರಾಜಸ್ವ ನಿರೀಕ್ಷಕರು ಪತ್ರದ ಸಂ. ಆರ್‌ಐ (ಕ)/ಪಿಆರ್/167/11–12, ದಿನಾಂಕ : 23–7–2011.

**ಕರ್ನಾಟಕ ಭೂ ಕಂದಾಯ 1964ರ ಅಧಿನಿಯಮ ಅಡಿಯಲ್ಲಿನ ಕಲಂ 68(1) ರಡಿಯಲ್ಲಿ**

ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಹೊಸಹಳ್ಳಿ ಗ್ರಾಮದ ಸರ್ವೆನಂ. 24/1 ರಲ್ಲಿ 0–01 ಗುಂಟೆ 24/2 ರಲ್ಲಿ 0–01 ಗುಂಟೆ, 24/3 ರಲ್ಲಿ 0–01 ಗುಂಟೆ ಕಾಲುದಾರಿ ಜುಮ್ಲಾ 0–03 ಬಿ ಖರಾಬ್ ಜಮೀನನ್ನು ವಾಸದ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಲು ನಿರ್ಧರಿಸಲಾಗಿದ್ದು, ಸದರಿ ಜಮೀನಿನ ಮೇಲೆ ಸಾರ್ವಜನಿಕ ಅಥವಾ ಯಾವುದೇ ವ್ಯಕ್ತಿಯ ಅಥವಾ ವ್ಯಕ್ತಿಗಳ ಹಿತಾಸಕ್ತಿಯು ಇರುವುದಿಲ್ಲವೆಂದು ಪರಿಗಣಿಸಿ ಅದರಲ್ಲಿನ ಸಾರ್ವಜನಿಕ ಹಕ್ಕು ಹಿತಾಸಕ್ತಿಯನ್ನು ನಿವೃತ್ತಿಗೊಳಿಸಲು ನಿರ್ಧರಿಸಲಾಗಿದೆ.

ಯಾವುದೇ ವ್ಯಕ್ತಿಯು ಅಥವಾ ವ್ಯಕ್ತಿಗಳು ಅಲ್ಲದೇ ಸಾರ್ವಜನಿಕರು ಸದರಿ ಜಮೀನಿನ ಹಕ್ಕನ್ನು ರದ್ದುಪಡಿಸುವ ಬಗ್ಗೆ ತಮ್ಮದೇ ಆದ ಯಾವುದೇ ವಿಧವಾದ ಏನಾದರೂ ಆಕ್ಷೇಪಣೆಗಳಿದ್ದಲ್ಲಿ ಈ ಅಧಿಸೂಚನೆ ಹೊರಡಿಸಿದ 90 ದಿನಗಳೊಳಗಾಗಿ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ರವರಿಗೆ ಅಂತಹ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ 90 ದಿನಗಳ ನಂತರ ಬಂದ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಚೆಕ್ಕುಬಂದಿ**

1) ಹೊಸಹಳ್ಳಿ ಗ್ರಾಮದ ಸರ್ವೆ ನಂ. 24/1, 24/2, 24/3 ರಲ್ಲಿ 0–03 ಗುಂಟೆ ಕಾಲು ದಾರಿ ಬಿ ಖರಾಬಿಗೆ

**ಪೂರ್ವಕ್ಕೆ :** ಸರ್ವೆ ನಂ. 24/1 ಮತ್ತು 24/2 ರ ಜಮೀನು
**ಪಶ್ಚಿಮಕ್ಕೆ :** ಸರ್ವೆ ನಂ. 24/1 ಮತ್ತು 24/2ರ ಜಮೀನು
**ಉತ್ತರಕ್ಕೆ :** ಸರ್ವೆ ನಂ. 23 ರ ಜಮೀನು
**ದಕ್ಷಿಣಕ್ಕೆ :** ಬಿಡಿಎ ರಸ್ತೆ

**ಪಿ.ಆರ್. ನಂ. 334**

**ತಹಸೀಲ್ದಾರ್**
ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು.

## ಕಂದಾಯ ಸಚಿವಾಲಯ

**ಅಧಿಸೂಚನೆ**

**ನಮೂನೆ 29**

**ಸಂಖ್ಯೆ : ಆರ್‌ಡಿ 91 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ : 1–3–2012.**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ : 29–9–2011ರ ದಿನಾಂಕದ ಎಲ್‌ಎನ್‌ಡಿ/ಸಿಆರ್–130/2011–12ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಬಿ–ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆರವರ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸರ್ಕಾರಿ ಬಿ–ಖರಾಬು ಜಮೀನಿನ ಮೇಲಣ ಸಾರ್ವಜನಿಕ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಬೈಚುಗುಪ್ಪೆ |
| ತಾಲ್ಲೂಕು | ಬೆಂಗಳೂರು ದಕ್ಷಿಣ ತಾಲ್ಲೂಕು |
| ಜಿಲ್ಲೆ | ಬೆಂಗಳೂರು ನಗರ ಜಿಲ್ಲೆ |
| ಸದರಿ ಭಾಗದ ವರ್ಣನೆ | ಸರ್ಕಾರಿ ಖರಾಬು |
| ಸರಿ ಸುಮಾರು ವಿಸ್ತೀರ್ಣ | 20 ಗುಂಟೆ (ಸರ್ವೆ ನಂ. 31) |
| ಮೇರೆಗಳು | ಪೂರ್ವಕ್ಕೆ : ಸ.ನಂ. 30ರ ಜಮೀನು<br>ಪಶ್ಚಿಮಕ್ಕೆ : ಸ.ನಂ. 31ರ ಉಳಿಕೆ ಜಮೀನು<br>ಉತ್ತರಕ್ಕೆ : ಸ.ನಂ. 31ರ ಉಳಿಕೆ ಜಮೀನು<br>ದಕ್ಷಿಣಕ್ಕೆ : ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.).

**ಪಿ.ಆರ್. ನಂ. 335**

## ಕಂದಾಯ ಸಚಿವಾಲಯ

## ಅಧಿಸೂಚನೆ

## ನಮೂನೆ 29

### ಸಂಖ್ಯೆ : ಆರ್‌ಡಿ 334 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ : 1–3–2012

### 68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ 12–8–2010ರ ದಿನಾಂಕದ ಎಲ್‌ಎನ್‌ಡಿ/(ಎನ್‌ಎ)ಸಿಆರ್/998/2009–10ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಬೆಂಗಳೂರು ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸರ್ಕಾರಿ ಬಂಡಿದಾರಿ ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಚೊಕ್ಕನಹಳ್ಳಿ |
| ತಾಲ್ಲೂಕು | ಬೆಂಗಳೂರು ಉತ್ತರ (ಅಪರ) |
| ಜಿಲ್ಲೆ | ಬೆಂಗಳೂರು ನಗರ |
| ಸದರಿ ಭಾಗದ ವರ್ಣನೆ | ಸರ್ಕಾರಿ ಬಂಡಿದಾರಿ |
| ಸರಿ ಸುಮಾರು ವಿಸ್ತೀರ್ಣ | 0.22 ಗುಂಟೆ (ಸ.ನಂ. 32, 42 ಮತ್ತು 43) |
| ಮೇರೆಗಳು<br>ಚೊಕ್ಕನಹಳ್ಳಿಯಿಂದ ಬೆಳ್ಳಹಳ್ಳಿ ಕಡೆಗೆ<br><br><br><br>ಬೆಂಗಳೂರಿನಿಂದ ಕಣ್ಣೂರು ರಸ್ತೆಗೆ | ಪೂರ್ವಕ್ಕೆ : ಸ.ನಂ. 32<br>ಪಶ್ಚಿಮಕ್ಕೆ : ಸ.ನಂ. 32<br>ಉತ್ತರಕ್ಕೆ : ಕಣ್ಣೂರು ಗ್ರಾಮದ ಗಡಿ<br>ದಕ್ಷಿಣಕ್ಕೆ : ಸ.ನಂ. 32<br>ಪೂರ್ವಕ್ಕೆ : ನಗರೇಶ್ವರ ನಾಗೇನಹಳ್ಳಿ ಗ್ರಾಮದ ಗಡಿ<br>ಪಶ್ಚಿಮಕ್ಕೆ : ಸ.ನಂ. 32 42 ಮತ್ತು 43<br>ಉತ್ತರಕ್ಕೆ : ಕಣ್ಣೂರು ಗ್ರಾಮದ ಗಡಿ<br>ದಕ್ಷಿಣಕ್ಕೆ : ನಗರೇಶ್ವರ ನಾಗೇನಹಳ್ಳಿ ಗ್ರಾಮದ ಗಡಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.).

**ಪಿ.ಆರ್. ನಂ. 336**

**ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು**

**ಸಂಖ್ಯೆ: ಎಲ್‌ಎನ್‌ಡಿ/ಸಿಆರ್/110/10–11**

**ಸಾರ್ವಜನಿಕ ಪ್ರಕಟಣೆ**

**ನಮೂನೆ–27**

**94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಖರಾಬು ಜಮೀನು ಜಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದು. ಸರ್ಕಾರಿ ಖರಾಬು ಜಮೀನಿನ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದು ಎಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2. ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ರ ಉಪ ಕಲಂ 1ರಂತೆ ಪ್ರದತ್ತವಾದ ಸದರಿ ಜಮೀನಿನಲ್ಲಿ ಅಥವಾ ಅವರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಾರ್ವಜನಿಕರು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ 90 (ತೊಂಬತ್ತು) ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಂ ಮಾಡಲಾದ ಮೊಬಲಗು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರ್ ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಂಗಳನ್ನು ಸದರಿ ಪ್ರಕರಣದ ಅಡಿಯಲ್ಲಿ ಡೆಪ್ಯೂಟಿ ಕಮೀಷನರ್ ರವರು ಪರಿಶೀಲಿಸುವರು.

ಈ ಪ್ರಕಟಣೆಯನ್ನು (ಅಧಿಸೂಚನೆ) ಸರ್ಕಾರದಿಂದ ಪೂರ್ವಾನುಮತಿ ಪಡೆದು ಹೊರಡಿಸಲಾಗಿದೆ.

**ಅನುಸೂಚಿ**

| | |
|---|---|
| ಗ್ರಾಮ | ಪಟ್ಟಣಗೆರೆ |
| ಹೋಬಳಿ | ಕೆಂಗೇರಿ |
| ತಾಲ್ಲೂಕು | ಬೆಂಗಳೂರು ದಕ್ಷಿಣ |
| ಜಿಲ್ಲೆ | ಬೆಂಗಳೂರು ಜಿಲ್ಲೆ |
| ಸರ್ಕಾರಿ ಜಮೀನು ಮೊದಲಾದುದರ ಭಾಗ | ಸರ್ಕಾರಿ ಖರಾಬು ಜಮೀನು |
| ಅಥವಾ ಭಾಗದ ವರ್ಣನೆ | ಪಟ್ಟಣಗೆರೆ ಸರ್ವೆ ನಂ: 55/1 |
| ಜಮೀನಿನ ವಿಸ್ತೀರ್ಣ | 0–35 ಗುಂಟೆ |

**ಚಕ್ಕುಬಂದಿ**

| | |
|---|---|
| **ಪೂರ್ವಕ್ಕೆ:** | ಇದೇ ಸರ್ವೆ ನಂ: 55/1 ರಲ್ಲಿನ ರಸ್ತೆ |
| **ಪಶ್ಚಿಮಕ್ಕೆ** | ಇದೇ ಸರ್ವೆ ನಂ: 55/1 ರಲ್ಲಿರುವ ಹಳ್ಳ |
| **ಉತ್ತರಕ್ಕೆ** | ಇದೇ ಸರ್ವೆ ನಂ: 55/1 ರಲ್ಲಿನ ಉಳಿಕೆ |
| **ದಕ್ಷಿಣಕ್ಕೆ:** | ಇದೇ ಸರ್ವೆ ನಂ: 55/1 ರಲ್ಲಿನ ಉಳಿಕೆ |

**ಪಿ.ಆರ್. 405**

**ತಹಶೀಲ್ದಾರ್**
ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು

## WATER RESOURCES SECRETARIAT

**NOTIFICATION No. WRD 62 KBN 2012, Bangalore, dated 24-2-2012.**

Government of Karnataka hereby guarantees the repayment of Principal amount and interest thereon during the pendency of the Bonds, on the due dates, with put and call options as indicated in the offer documents in respect of Series 2012-A Bonds to be issued by Krishna Bhagya Jala Nigam Limited (the Company) to the extent of Rs. 500.00 (Rupees Five Hundred Crores) crores to be allotted on or before 31st March 2012 and to redeem the same in the years stipulated in the respective offer documents. This Guarantee is unconditional and irrevocable and will be in force until all the Series 2012-A Bonds issued by the Company pursuant to the above are redeemed.

By Order and in the name of the Governor of Karnataka,
**I.D. DHAMAN**
Officer on Special Duty,
Water Resources Department (KBJN).

**P.R. No. 338**

## ಸಮಾಜ ಕಲ್ಯಾಣ ಇಲಾಖೆ

**ಸಮಾಜ ಕಲ್ಯಾಣ ಆಯುಕ್ತರ ಕಛೇರಿ, 5ನೇ ಮಹಡಿ. ಬಹುಮಹಡಿಗಳ ಕಟ್ಟಡ, ಬೆಂಗಳೂರು,**

**ಅಧಿಕೃತ ಜ್ಞಾಪನಾ**

**ಸಂಖ್ಯೆ ಸಕನಿ/ಸಿಬ್ಬಂದಿ-1/ಸಿಆರ್-81/2009-10, ಬೆಂಗಳೂರು, ದಿನಾಂಕ 02-01-2012.**

**ವಿಷಯ:-** ಸಮಾಜ ಕಲ್ಯಾಣ ಇಲಾಖೆಯಲ್ಲಿನ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು / ಪತ್ರಾಂಕಿತ ವ್ಯವಸ್ಥಾಪಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ 01-01-2012 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ

**ಉಲ್ಲೇಖ:-** ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಸಿಆಸುಇ/43/ಎಸ್ಎಸ್ಆರ್ 27 ದಿನಾಂಕ 14-12-1987

ಸಮಾಜ ಕಲ್ಯಾಣ ಇಲಾಖೆಯಲ್ಲಿನ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ / ಪತ್ರಾಂಕಿತ ವ್ಯವಸ್ಥಾಪಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಉಲ್ಲೇಖಿತ ಸರ್ಕಾರದ ಅಧಿಕೃತ ಜ್ಞಾಪನಾದಲ್ಲಿನ ನಿರ್ದೇಶನದಂತೆ ದಿನಾಂಕ 01-01-2012 ರಲ್ಲಿದ್ದಂತೆ ಇಲಾಖೆಯ ವೆಬ್‌ಸೈಟ್ www.sw.kar.nic.in ನಲ್ಲಿ ಪ್ರಕಟಿಸಲಾಗಿದೆ. ಸಂಬಂಧಪಟ್ಟ ಅಧಿಕಾರಿಗಳಿಗೆ ಜೇಷ್ಠತೆಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ 30 ದಿವಸಗಳೊಳಗೆ ಸಲ್ಲಿಸಲು ಸೂಚಿಸಲಾಗಿದೆ.

ನಿಗಧಿಪಡಿಸಿದ ದಿನಾಂಕದೊಳಗೆ ಬಂದಂತಹ ಆಕ್ಷೇಪಣೆಗಳನ್ನು ಜೇಷ್ಠತಾ ನಿಯಮಾವಳಿಗನುಸಾರ ಪರಿಶೀಲಿಸಿ ಸರಿಪಡಿಸಲಾಗುವುದು ಅವಧಿ ಮೀರಿ ಬಂದಂತಹ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಆಯುಕ್ತರು,**
**ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.**

**ಸಂಖ್ಯೆ: ಸಕನಿ/ಸಿಬ್ಬಂದಿ-1/ಸಿಆರ್-81/2009-10, ದಿನಾಂಕ : 02-01-2012**

**ನಮೂನೆ**

**ದಿನಾಂಕ 01-01-2012 ರಲ್ಲಿದ್ದಂತೆ ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ**

| ಕ್ರ.ಸ. | ಅಧಿಕಾರಿಗಳ ಹೆಸರು | ನೇರ ನೇಮಕಾತಿ / ಮುಂಬಡ್ತಿ / ಇತರೆ | ಜಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | ಶ್ರೀ / ಶ್ರೀಮತಿ | | | | | | |
| 1 | ಎಂ.ವಿ. ಶ್ರೀನಿವಾಸಲು | ಮುಂಬಡ್ತಿ | | 09-04-52 | 28-03-73 | 17-05-01 | 17-05-01 |
| 2 | ಪಿ.ಜಿ. ಕಾವೇರಿಯಮ್ಮ | ಮುಂಬಡ್ತಿ | | 19-05-52 | 28-03-73 | 17-05-01 | 17-05-01 |
| 3 | ಹಾಜಿರಾಬೇಗಂ | ಮುಂಬಡ್ತಿ | | 11-06-53 | 19-05-73 | 17-05-01 | 17-05-01 |
| 4 | ಟಿ.ಎಸ್. ತಿಮ್ಮಪ್ಪ | ಮುಂಬಡ್ತಿ | | 06-03-54 | 27-09-75 | 17-05-01 | 17-05-01 |
| 5 | ಬಿ.ಡಿ. ದೇಶಪಾಂಡೆ | ಮುಂಬಡ್ತಿ | | 01-06-52 | 27-09-75 | 17-05-01 | 17-05-01 |
| 6 | ಸಿ.ಎಸ್. ಶಿವಮೂರ್ತಿ | ಮುಂಬಡ್ತಿ | | 15-03-54 | 27-09-75 | 17-05-01 | 17-05-01 |
| 7 | ಎಂ. ನಾಗರಾಜು | ಮುಂಬಡ್ತಿ | | 01-03-53 | 27-09-75 | 17-05-01 | 17-05-01 |
| 8 | ಎಸ್.ಬಿ. ಸಾದಿಯೇ | ಮುಂಬಡ್ತಿ | | 23-06-52 | 27-09-75 | 17-05-01 | 17-05-01 |
| 9 | ವಿ.ಜಿ. ಜೋಷಿ | ಮುಂಬಡ್ತಿ | | 01-06-54 | 27-09-75 | 17-05-01 | 17-05-01 |
| 10 | ಎಸ್.ಆರ್. ಕಮ್ತಾರ್ | ಮುಂಬಡ್ತಿ | | 01-06-54 | 27-09-75 | 17-05-01 | 17-05-01 |

| ಕ್ರ.ಸ. | ಅಧಿಕಾರಿಗಳ ಹೆಸರು | ನೇರ ನೇಮಕಾತಿ / ಮುಂಬಡ್ತಿ / ಇತರೆ | ಜಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 11 | ಕೆ.ಬಿ. ಆನಂದ್ | ಮುಂಬಡ್ತಿ | | 27–05–53 | 27–09–75 | 17–05–01 | 17–05–01 |
| 12 | ಕೆ. ಯೋಗೇಶ್ವರಪ್ಪ | ಮುಂಬಡ್ತಿ | | 02–09–52 | 27–09–75 | 17–05–01 | 17–05–01 |
| 13 | ಎಸ್.ಎಸ್. ಅಂಗಡಿ | ಮುಂಬಡ್ತಿ | | 01–06–52 | 27–09–75 | 17–05–01 | 17–05–01 |
| 14 | ಎಲ್. ಶಿವಲಿಂಗೇಗೌಡ | ಮುಂಬಡ್ತಿ | | 20–11–52 | 27–09–75 | 17–05–01 | 17–05–01 |
| 15 | ಆರ್.ಬಿ. ಕಮ್ಮಾರ್ | ಮುಂಬಡ್ತಿ | | 01–06–52 | 27–09–75 | 17–05–01 | 17–05–01 |
| 16 | ಎಸ್.ಸಿ. ತಿರ್ಲಾಪುರ್ | ಮುಂಬಡ್ತಿ | | 02–05–53 | 27–09–75 | 17–05–01 | 17–05–01 |
| 17 | ಪೋಲಯ್ಯ | ಮುಂಬಡ್ತಿ | ಪ.ವರ್ಗ | 12–06–55 | 01–02–81 | 17–05–01 | 17–05–01 |
| 18 | ಎಂ. ನಾರಾಯಣರೆಡ್ಡಿ | ಮುಂಬಡ್ತಿ | | 05–05–52 | 27–09–75 | 17–05–01 | 17–05–01 |
| 19 | ಎಸ್.ಬಿ. ಬಿರಾದಾರ್ | ಮುಂಬಡ್ತಿ | | 01–06–52 | 27–09–75 | 17–05–01 | 17–05–01 |
| 20 | ಜಿ.ಎಂ. ಸಾಲಿಮಠ | ಮುಂಬಡ್ತಿ | | 11–03–53 | 27–09–75 | 17–05–01 | 17–05–01 |
| 21 | ಎಲ್.ಜೆ. ಗಂಟಿ | ಮುಂಬಡ್ತಿ | ಪ.ಜಾತಿ | 06–06–53 | 27–09–75 | 17–05–01 | 17–05–01 |
| 22 | ಕೆ.ಜೆ. ಕಾಂಬ್ಳೆ | ಮುಂಬಡ್ತಿ | ಪ.ಜಾತಿ | 03–06–52 | 27–09–75 | 17–05–01 | 17–05–01 |
| 23 | ಸಿಂಗಾರಿಗೌಡ | ಮುಂಬಡ್ತಿ | | 08–06–55 | 22–06–76 | 17–05–01 | 17–05–01 |
| 24 | ಬಿ. ಹನುಮಂತರಾಯಪ್ಪ | ವಿಲೀನ | | 02–03–55 | 30–11–84 | 01–03–04 | 01–03–04 |
| 25 | ಜಿ.ಪಿ. ದೇವರಾಜ್ | ವಿಲೀನ | ಪ.ಜಾತಿ | 28–06–67 | 07–04–92 | 01–03–04 | 01–03–04 |
| 26 | ಆರ್. ಸುಬ್ರಮಣ್ಯಂ | ವಿಲೀನ | | 01–06–65 | 04–09–92 | 01–03–04 | 01–03–04 |
| 27 | ಬಿ.ಟಿ. ಮಂಜುನಾಥ | ವಿಲೀನ | ಪ.ಜಾತಿ | 01–07–67 | 24–07–93 | 31–01–05 | 31–01–05 |
| 28 | ಬೋರೇಗೌಡ. ಕೆ.ಬಿ. | ಮುಂಬಡ್ತಿ | | 19–08–52 | 27–09–75 | 01–06–09 | 01–06–09 |
| 29 | ಮಂಜೂರ್ ಹುಸೇನ್ | ಮುಂಬಡ್ತಿ | | 01–08–53 | 27–09–75 | 01–06–09 | 01–06–09 |
| 30 | ಗೋಪಾಲ್. ಹೆಚ್. | ಮುಂಬಡ್ತಿ | ಪ.ಜಾತಿ | 06–01–52 | 27–09–75 | 01–06–09 | 01–06–09 |
| 31 | ನವೀನ್ ಶಿಂತ್ರೆ | ನೇರ ನೇಮಕಾತಿ | | 20–09–78 | 06–08–10 | 17–07–10 | 17–07–10 |
| 32 | ಭುಜಬಲಿ | ನೇರ ನೇಮಕಾತಿ | | 08–06–82 | 08–08–10 | 17–07–10 | 17–07–10 |
| 33 | ಪ್ರಶಾಂತ ವರಗಪ್ಪನವರ್ | ನೇರ ನೇಮಕಾತಿ | | 20–07–76 | 24–07–10 | 17–07–10 | 17–07–10 |
| 34 | ಬಿ.ರಂಗೇಗೌಡ | ನೇರ ನೇಮಕಾತಿ | | 08–06–78 | 21–07–10 | 17–07–10 | 17–07–10 |
| 35 | ಬಿ.ವಿ.ಚೈತ್ರ | ನೇರ ನೇಮಕಾತಿ | | 31–12–81 | 22–07–10 | 17–07–10 | 17–07–10 |
| 36 | ಜಿ. ಸಂತೋಷ ಕುಮಾರ್ | ನೇರ ನೇಮಕಾತಿ | ಪ.ಜಾತಿ | 08–10–77 | 31–07–10 | 17–07–10 | 17–07–10 |
| 37 | ಯಲ್ಲೇಶ್ ಆನಂದ್ ಕಾಳೆ | ನೇರ ನೇಮಕಾತಿ | ಪ.ಜಾತಿ | 21–07–79 | 06–08–10 | 17–07–10 | 17–07–10 |
| 38 | ಪುರುಷೋತ್ತಮ ಎನ್.ಆರ್ | ನೇರ ನೇಮಕಾತಿ | ಪ.ಜಾತಿ | 18–07–80 | 22–07–10 | 17–07–10 | 17–07–10 |
| 39 | ಶಿವಾನಂದ.ಬಿ.ಕರಾಳೆ | ನೇರ ನೇಮಕಾತಿ | | 17–05–82 | 26–07–10 | 17–07–10 | 17–07–10 |
| 40 | ಸೋಮಶೇಖರ್. ಜಿ.ಎಸ್. | ನೇರ ನೇಮಕಾತಿ | | 20–07–74 | 02–08–10 | 17–07–10 | 17–07–10 |
| 41 | ಜಗದೀಶ್ ಗಂಗಣ್ಣವರ್ | ನೇರ ನೇಮಕಾತಿ | | 27–08–82 | 05–08–10 | 17–07–10 | 17–07–10 |
| 42 | ಸಿ. ಶಿವಕುಮಾರ್ | ನೇರ ನೇಮಕಾತಿ | | 18–04–77 | 20–07–10 | 17–07–10 | 17–07–10 |

| ಕ್ರ.ಸ. | ಅಧಿಕಾರಿಗಳ ಹೆಸರು | ನೇರ ನೇಮಕಾತಿ / ಮುಂಬಡ್ತಿ / ಇತರೆ | ಜಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 43 | ಶಿವಾನಂದ. ಎಂ. ಕುಂಬಾರ | ನೇರ ನೇಮಕಾತಿ | | 15–07–78 | 21–07–10 | 17–07–10 | 17–07–10 |
| 44 | ಶಿವಕುಮಾರ್. ಎಂ.ವಿ. | ನೇರ ನೇಮಕಾತಿ | | 06–09–80 | 13–08–10 | 17–07–10 | 17–07–10 |
| 45 | ಕೆ.ನಾಗರಾಜ | ನೇರ ನೇಮಕಾತಿ | | 12–06–79 | 22–07–10 | 17–07–10 | 17–07–10 |
| 46 | ಪ್ರೇಮಸಾಗರ | ನೇರ ನೇಮಕಾತಿ | ಪ.ಜಾತಿ | 22–09–79 | 26–07–10 | 17–07–10 | 17–07–10 |
| 47 | ರಮೇಶ್ ಕಳಸದ | ನೇರ ನೇಮಕಾತಿ | | 01–08–78 | 02–08–10 | 17–07–10 | 17–07–10 |
| 48 | ಬಿ.ಎಂ. ಪ್ರಕಾಶ್ | ನೇರ ನೇಮಕಾತಿ | | 18–07–74 | 20–07–10 | 17–07–10 | 17–07–10 |
| 49 | ಶುಭ.ಪಿ | ನೇರ ನೇಮಕಾತಿ | | 15–04–82 | 23–07–10 | 17–07–10 | 17–07–10 |
| 50 | ರಾಮನಗೌಡ ಕನ್ನೂಳ್ಳಿ | ನೇರ ನೇಮಕಾತಿ | | 24–08–75 | 22–07–10 | 17–07–10 | 17–07–10 |
| 51 | ಕೆ. ದೀಪಶ್ರೀ. | ನೇರ ನೇಮಕಾತಿ | | 27–06–80 | 21–07–10 | 17–07–10 | 17–07–10 |
| 52 | ಖಾಜಾ ಹುಸೇನ್ ಮುಧೋಳ | ನೇರ ನೇಮಕಾತಿ | | 12–06–82 | 28–07–10 | 17–07–10 | 17–07–10 |
| 53 | ಮಂಜುನಾಥ. ಹೆಚ್.ವಿ. | ನೇರ ನೇಮಕಾತಿ | | 20–05–80 | 28–07–10 | 17–07–10 | 17–07–10 |
| 54 | ಸುಂದರ್. ಎಸ್. | ನೇರ ನೇಮಕಾತಿ | ಪ.ಜಾತಿ | 01–06–74 | 11–08–10 | 17–07–10 | 17–07–10 |
| 55 | ಕೌಸರ್ ರೇಷ್ಮಾ.ಜಿ. | ನೇರ ನೇಮಕಾತಿ | | 19–05–81 | 22–07–10 | 17–07–10 | 17–07–10 |
| 56 | ಜಗದೀಶ್ ಹೆಬ್ಬಳ್ಳಿ | ನೇರ ನೇಮಕಾತಿ | | 01–06–79 | 05–08–10 | 17–07–10 | 17–07–10 |
| 57 | ಸರಸ್ವತಿ | ನೇರ ನೇಮಕಾತಿ | | 01–07–75 | 19–07–10 | 17–07–10 | 17–07–10 |
| 58 | ಸಕೀನ | ನೇರ ನೇಮಕಾತಿ | | 03–08–84 | 02–08–10 | 17–07–10 | 17–07–10 |
| 59 | ಮಹೇಶ್ | ನೇರ ನೇಮಕಾತಿ | ಪ.ಜಾತಿ | 01–08–77 | 19–08–10 | 17–07–10 | 17–07–10 |
| 60 | ಕೆ.ಹೆಚ್. ಸತೀಶ್ | ನೇರ ನೇಮಕಾತಿ | ಪ.ಜಾತಿ | 07–07–77 | 28–07–10 | 17–07–10 | 17–07–10 |
| 61 | ಪ್ರಭಾ.ಬಿ.ಎಸ್. | ನೇರ ನೇಮಕಾತಿ | | 28–02–77 | 22–07–10 | 17–07–10 | 17–07–10 |
| 62 | ಕೆ.ಲಲಿತ | ನೇರ ನೇಮಕಾತಿ | | 19–06–79 | 22–07–10 | 17–07–10 | 17–07–10 |
| 63 | ಎಲ್. ಲಲಿತಾಬಾಯಿ | ನೇರ ನೇಮಕಾತಿ | ಪ.ಜಾತಿ | 01–06–75 | 23–07–10 | 17–07–10 | 17–07–10 |
| 64 | ಮಾಲತಿ. ಬಿ. | ನೇರ ನೇಮಕಾತಿ | | 25–01–80 | 21–07–10 | 17–07–10 | 17–07–10 |
| 65 | ಪ್ರೇಮಾ. ಟಿ.ಎಲ್.ಎಸ್. | ನೇರ ನೇಮಕಾತಿ | | 04–11–80 | 21–07–10 | 17–07–10 | 17–07–10 |
| 66 | ಬಿ.ಎಸ್.ಹೇಮಲತ | ನೇರ ನೇಮಕಾತಿ | ಪ.ಜಾತಿ | 24–05–76 | 23–07–10 | 17–07–10 | 17–07–10 |
| 67 | ವೆಂಕಟೇಶ | ನೇರ ನೇಮಕಾತಿ | | 05–01–81 | 23–07–10 | 17–07–10 | 17–07–10 |
| 68 | ಭಾರತಿ. ಸಿ.ಆರ್. | ನೇರ ನೇಮಕಾತಿ | | 21–05–80 | 11–08–10 | 17–07–10 | 17–07–10 |
| 69 | ಸರೋಜ | ನೇರ ನೇಮಕಾತಿ | | 21–07–82 | 05–08–10 | 17–07–10 | 17–07–10 |
| 70 | ಕೆ.ಅನ್ನಪೂರ್ಣ | ನೇರ ನೇಮಕಾತಿ | | 26–01–77 | 22–07–10 | 17–07–10 | 17–07–10 |
| 71 | ವಿಜಯಲಕ್ಷ್ಮಿ | ನೇರ ನೇಮಕಾತಿ | ಪ.ಜಾತಿ | 19–01–85 | 26–07–10 | 17–07–10 | 17–07–10 |
| 72 | ಅನಿತ. ವಿ. ಮಡ್ಲೂರ್ | ನೇರ ನೇಮಕಾತಿ | ಪ.ವರ್ಗ | 01–06–78 | 22–07–10 | 17–07–10 | 17–07–10 |
| 73 | ಮಹಾಂತೇಶ್ ಚಿವತಗುಂಡಿ | ನೇರ ನೇಮಕಾತಿ | | 21–07–71 | 24–07–10 | 17–07–10 | 17–07–10 |

| ಕ್ರ.ಸ. | ಅಧಿಕಾರಿಗಳ ಹೆಸರು | ನೇರ ನೇಮಕಾತಿ / ಮುಂಬಡ್ತಿ / ಇತರೆ | ಜಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 74 | ಎನ್.ಜಿ. ಪ್ರಕಾಶ್ | ಮುಂಬಡ್ತಿ | | 11–01–52 | 27–09–75 | 10–08–10 | 10–08–10 |
| 75 | ಎ. ಪುಟ್ಟವೀರಸ್ವಾಮಿ | ಮುಂಬಡ್ತಿ | | 17–05–53 | 27–09–75 | 10–08–10 | 10–08–10 |
| 76 | ಪಿ.ಎಂ. ರಾಧಾಕೃಷ್ಣ | ಮುಂಬಡ್ತಿ | | 09–03–54 | 27–09–75 | 10–08–10 | 10–08–10 |
| 77 | ಡಿ.ಎನ್. ಕಪಟ್‌ಕರ್ | ಮುಂಬಡ್ತಿ | | 01–06–53 | 27–09–75 | 10–08–10 | 10–08–10 |
| 78 | ಎಸ್.ಬಿ. ರಾಜಶೇಖರ್ | ಮುಂಬಡ್ತಿ | | 31–10–54 | 27–09–75 | 10–08–10 | 10–08–10 |
| 79 | ಸೈಯದ್ ಮುನೀರ್ | ಮುಂಬಡ್ತಿ | | 16–04–54 | 27–09–75 | 10–08–10 | 10–08–10 |
| 80 | ಚಂದ್ರಶೇಖರ. ಪಿ. ನಾಯಕ್ | ಮುಂಬಡ್ತಿ | | 05–01–52 | 27–09–75 | 10–08–10 | 10–08–10 |
| 81 | ಎ.ಬಿ. ಪಾಟೀಲ್ | ಮುಂಬಡ್ತಿ | | 16–06–53 | 29–05–76 | 10–08–10 | 10–08–10 |
| 82 | ಎಂ. ಕೆಂಚಪ್ಪ | ಮುಂಬಡ್ತಿ | ಪ.ಜಾತಿ | 08–05–52 | 18–12–74 | 10–08–10 | 10–08–10 |
| 83 | ಪಿ. ಹರ್ಷಕುಮಾರ್ | ಮುಂಬಡ್ತಿ | | 05–08–55 | 14–09–77 | 10–08–10 | 10–08–10 |
| 84 | ಎಸ್. ಸಿದ್ದರಾಜು | ಮುಂಬಡ್ತಿ | ಪ.ಜಾತಿ | 21–06–57 | 09–12–81 | 10–08–10 | 10–08–10 |
| 85 | ಎಸ್.ಎಂ. ಖಾದ್ರಿ | ಮುಂಬಡ್ತಿ | | 11–05–52 | 11–10–79 | 10–08–10 | 10–08–10 |
| 86 | ಡಿ.ಎಸ್. ಮಂಜುನಾಥ್ | ಮುಂಬಡ್ತಿ | | 20–03–55 | 08–12–75 | 10–08–10 | 10–08–10 |
| 87 | ಎಸ್. ಕೃಷ್ಣಪ್ಪ | ಮುಂಬಡ್ತಿ | ಪ.ವರ್ಗ | 26–06–72 | 20–09–02 | 10–08–10 | 10–08–10 |

**ಆಯುಕ್ತರು,**
**ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು**

**ಪಿ.ಆರ್. 217**

## IN THE COURT OF 5 th ADDITIONAL CHIEF METROPOLITAN MAGISTRATE COURT, BANGALORE CITY

**Date:16.02.2012**

it is hereby notified for the information of the public that the under mentioned two wheelers which is in the custody of kamakshipalya police station Bangalore city has unclaimed shall be confiscated to the government and Disposed if not claimed by the owner with proof of ownership with in one month from the date of the publication of this notification.

| S.No. | C.misc No. | P.F No. | Vehicle No. | Engine No. | Chasis No. |
|---|---|---|---|---|---|
| 1 | 1665/2011 | 198/11 | 1)KA-02-EJ-1913 TVSFIERO | MI121M60612, | M121F159148 |
| 2 | -do- | -do- | 2)KA-02-EA-9918 YAMAHA | 1L3028138, | 99K1L6-028138 |
| 3 | 1671/2011 | 200/11 | 1) KA-03-EN-3939 TVS VICTOR | N3302M431730 | N3302F429038 |
| 4 | -do- | -do- | 2) KA-02-EB-1338 YAMAHA | IDI152475 | ILI-152475 |
| 5 | 1679/2011 | 202/11 | KA-03-EA-9169 YAMAHA | 5060795 | 00FSD00-5060795 |

| S.No. | C.misc No. | P.F No. | Vehicle No. | Engine No. | Chasis No. |
|---|---|---|---|---|---|
| 6 | -do- | -do- | 2)CKE-9077<br>YAMAHA | 1DIPO98782 | ILI-098782 |
| 7 | 1683/2011 | 203/11 | 1)KA-02-2308<br>TVS XL | MD621BD1 | 191L46577 |
| 8 | -do- | -do- | 2)KA-04-U-9902<br>BAJAJ CALIBER, | DDMBFA8504 | DPFBFA16289 |
| 9 | 1689/2011 | 204/11 | 1)KA-01-X-289<br>BAJAJ CT-100 | DUMBLE87415 | 0FBLE55209 |
| 10 | -do- | -do- | 2)KA-05-ED-7350<br>TVS XL | P1008F318229 | - |
| 11 | 1712/2011 | 207/11 | 1)KA-27-H-8650<br>TVS XL | P3008F311516 | - |
| 12 | -do- | -do- | 2)KA-02-ES-5045<br>TVS VICTOR | 0F1D51390919 | MD625AF165018728 |
| 13 | -do- | -do- | 3)KA-02-EM-5740<br>BAJAJ CT-100, | DUMBLC39707 | DUFBLC46513 |
| 14 | 728/2011 | 216/11 | 1)KA-41-K-2740<br>HERO HONDA SPLNDER | HA10EAB9D28295 | MBLHA10FJ89B09073 |
| 15 | -do- | -do- | 2)KA-04-EF-558<br>TVS FIERO | M1301M163205 | M1301F162296 |
| 16 | 1810/11 | 253/11 | 1)Old bajaj chetak<br>No. KA-02-EJ-1728 | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | |
| 17 | -do- | -do- | 2)Old bajaj chetak<br>No. KA-03-K-8575, | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ | |
| 18 | -do- | -do- | 3)Old bajaj chetak<br>No. CKN-6388, | W06E024 410, | ಇದು ತುಕ್ಕು ಹಿಡಿದಿರುವುದರಿಂದ ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. |
| 19 | -do- | -do- | 4)Old Hero puch<br>No. KA-03-L-4795, | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | |
| 20 | -do- | -do- | 5)Old bajaj chetak<br>No. CAR-8255 | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | |
| 21 | -do- | -do- | 6)Old Scooty pept<br>No. KA-03-EY-4601, | ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | KIFPLO21 15, |
| 22 | 1811/11 | 254/11 | 1)Old kinetic honda<br>No. KA-05-X-6827, | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | |
| 23 | -do- | -do- | 2)Old kinetic Zoom<br>No. KA-01-E-3019, | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | |

| S.No. | C.misc No. | P.F No. | Vehicle No. | Engine No. | Chasis No. |
|---|---|---|---|---|---|
| 24 | -do- | -do- | 3)Old kinetic marvel<br>No. KA-05-X-3878, | ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | KIFPLO2115 |
| 25 | -do- | -do- | 4)Old TVS XL<br>No. KA-05-E-1809, | ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | AOO2FPLO2115 |
| 26 | -do- | -do- | 5)Old TVS XL<br>No. KA-04-EB-4864, | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | |
| 27 | -do- | -do- | 6)Old bajaj chetak<br>No. KA-03-EB-1783, | ಇದು ತುಕ್ಕು ಹಿಡಿದಿರುವುದರಿಂದ ಇಂಜಿನ್ ನಂ. ಚಾಸಿಸ್ ನಂಬರ್ ಸ್ಪಷ್ಟವಾಗಿ ಕಂಡುಬರುತ್ತಿಲ್ಲ. | |

**5th Additional chief metropolitan magistrate,**
**Bangalore city**

**P.R. 215**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ:30/1990-91 ದಿನಾಂಕ: 02/05/1990.**

**àNVÍ0H1.AA¿Í.71A.30/90-91, º¼ñNP0 20/12/2011.**

**ಉಪಸ್ಥಿತರು : ಶ್ರೀ.ಕೆ.ಬಿ.ಮಂಜುನಾಥ**, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು

ÀNïïñÌ º : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು

ApÌ ¹ñÊÊô 0 BÊöóÀYçô : ಪತ್ತೆಯಾಗಿರುವುದಿಲ್ಲ.

¿ÍPÊ§ದ ÔôôVñÍNÙYçô0

1. ದಿನಾಂಕ: 02–05–1990ರಂದು ಬೆಳಿಗ್ಗೆ 6.00 ಗಂಟೆಯ ಸಮಯದಲ್ಲಿ ವಾಣಿಜ್ಯ ತೆರಿಗೆ ಇನ್ಸ್‌ಪೆಕ್ಟರ್, ಸಂಚಾರಿ ಚೆಕ್‌ಪೋಸ್ಟ್–2 ಇವರು ಬೆಂಗಳೂರು ಪಶ್ಚಿಮ, ಕಾಮಾಕ್ಷಿಪಾಳ್ಯದ ಬಸ್ಸು ನಿಲ್ದಾಣದ ಹತ್ತಿರ ಶ್ರೀಗಂಧದ ತುಂಡುಗಳು ತುಂಬಿರುವ ಚೀಲಗಳು ಇರುವ ಬಗ್ಗೆ ನೀಡಿದ ಮಾಹಿತಿಯ ಮೇರೆಗೆ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಸದರಿ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಲಾಗಿ, ಗೋಣಿಚೀಲಗಳು ಹಾಗೂ ಒಂದು ರಟ್ಟಿನ ಪೆಟ್ಟಿಗೆ ಇರುವುದು ಕಂಡುಬಂದಿರುತ್ತದೆ. ನಂತರ ಸದರಿ ಚೀಲಗಳನ್ನು ತೆಗೆಯಿಸಿ ನೋಡಲಾಗಿ, ಶ್ರೀಗಂಧದ ತುಂಡುಗಳಿದ್ದು, ಒಟ್ಟು ತೂಕ 38 ಕೆ.ಜಿ ಇರುತ್ತದೆ. ಇದರ ವಾರಸುದಾರರು ಯಾರಾದರೂ ಇರಬಹುದೆಂದು ಸುತ್ತಮುತ್ತಲಿನ ಜನರನ್ನು ವಿಚಾರಿಸಲಾಗಿ, ಮಾಹಿತಿ ಲಭ್ಯವಾಗಿರುವುದಿಲ್ಲ. ಸೂಕ್ತ ರಹದಾರಿ ಇಲ್ಲದೇ ಶ್ರೀಗಂಧವನ್ನು ಸಾಗಣೆ ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಪ್ರಕಾರ ಅಕ್ರಮವಾಗಿರುವುದರಿಂದ ಸದರಿ ಶ್ರೀಗಂಧವನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ 38 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ಸಾಗಣೆ ಅಥವಾ ದಾಸ್ತಾನು ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಹಾಗೂ ಆರೋಪಿಗಳು ಪತ್ತೆಯಾಗದೇ ಇರುವ ಕಾರಣ, ಅಮಾನತ್ತುಪಡಿಸಿಕೊಂಡಿರುವ 38 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಕೆ.ಯು.ಪೋತಪ್ಪ ಬಿನ್ ಲೇಟ್ ಶ್ರೀ.ಕೆ.ಯು.ಅಂಬಣ್ಣ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಶ್ರೀ.ಎನ್.ಜಿ.ಸತ್ಯನಾರಾಯಣ, ವಲಯ ಅರಣ್ಯಾಧಿಕಾರಿ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಶ್ರೀ.ರವಿಕುಮಾರ್, ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:16–09–2011ರಂದು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ನಡೆಸಿರುತ್ತಾರೆ.

4. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಆರೋಪಿಗಳು ಪತ್ತೆಯಾಗದೇ ಇರುವುದರಿಂದ ಹಾಗೂ ಪ್ರತಿವಾದಿಗಳು ಹಾಜರಿರದ ಕಾರಣ ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

5(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 38 ಕೆ.ಜಿ ಶ್ರೀಗಂಧದ ತುಂಡುಗಳನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87 ರ ಉಲ್ಲಂಘನೆಯಾಗಿದೆಯೇ?

5(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 38 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

5(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

5(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

5(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

5(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

6. ದಿನಾಂಕ:02–05–1990ರಂದು ಬೆಳಿಗ್ಗೆ 6.00 ಗಂಟೆಯ ಸಮಯದಲ್ಲಿ ಬೆಂಗಳೂರು ಪಶ್ಚಿಮ, ಕಾಮಾಕ್ಷಿಪಾಳ್ಯದ ಬಸ್ಸು ನಿಲ್ದಾಣದ ಬಳಿ ಶ್ರೀಗಂಧದ ತುಂಡುಗಳನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಶ್ರೀಗಂಧವನ್ನು ದಾಸ್ತಾನು ಮಾಡಿರುವ ವ್ಯಕ್ತಿಗಳು ಪತ್ತೆಯಾಗಿರುವುದಿಲ್ಲ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಸರ್ಕಾರಿ ವಕೀಲರು ತಮ್ಮ ವಾದದಲ್ಲಿ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ಸರ್ಕಾರಿ ಸ್ವತ್ತಾಗಿದ್ದು, ಪ್ರಕರಣದಲ್ಲಿ ಒಳಗೊಂಡಿರುವ 38 ಕೆ.ಜಿ ಶ್ರೀಗಂಧದ ವಾರಸುದಾರರು ಇಲ್ಲದಿರುವುದರಿಂದ ಸದರಿ ಮಾಲನ್ನು ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ವಾದಿಸಿರುತ್ತಾರೆ.

7. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾದ 38 ಕೆ.ಜಿ ಶ್ರೀಗಂಧದ ತುಂಡುಗಳನ್ನು ಫಿರ್ಯಾದಿಯು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:30/1990–91ರಲ್ಲಿ ಅಮಾನತ್ತುಪಡಿಸಿಕೊಂಡಿರುವ 38 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:20–12–2011ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ,**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು

**ಪಿ.ಆರ್. 242**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ:62/1990–91 ದಿನಾಂಕ:15/06/1990.**

**àNVÌ0H1.AA¿Í.71A.62/90-91, º¼ñNP020/12/2011.**

**ಉಪಸ್ಥಿತರು : ಶ್ರೀ.ಕೆ.ಬಿ.ಮಂಜುನಾಥ**, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು

**ÀNïïñÌ º :** ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು

**ApÌ ¹ñÊÊô 0 BÊöóÀYçô :** ಪತ್ತೆಯಾಗಿರುವುದಿಲ್ಲ.

**¿ÍPÊ§ದ ÔôôVñÌNÙYçô0**

1. ದಿನಾಂಕ:15–06–1990ರಂದು ಸಂಜೆ 5.00 ಗಂಟೆಯ ಸಮಯದಲ್ಲಿ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಮೈಸೂರು ರಸ್ತೆ ವಾಣಿಜ್ಯ ತೆರಿಗೆ ಠಾಣೆಯ ಬಳಿ ತನಿಖಾ ಕಾರ್ಯ ನಿರ್ವಹಿಸುತ್ತಿದ್ದಾಗ ತನಿಖಾ ಠಾಣೆಯಿಂದ ಸುಮಾರು ಒಂದು ಫರ್ಲಾಂಗ್ ದೂರದ ರಸ್ತೆ ಬದಿಯಲ್ಲಿ ಗೋಣಿಚೀಲದಿಂದ ಹೊಲೆದು ಮಾಡಲಾದ ಪಾರ್ಸೆಲ್ ಬಂಡಲ್‌ಗಳು ಬಿದ್ದಿರುವುದು ಕಂಡುಬಂದು ವಾರಸುದಾರರು ಯಾರಾದರೂ ಇರಬಹುದೆಂದು ಕಾಯ್ದು ನೋಡಲಾಗಿ, ಯಾರು ಸಹ ಕಂಡುಬಾರದೇ ಇದ್ದುದರಿಂದ ಅನುಮಾನಸ್ಪದವಾಗಿ ಬಿದ್ದಿದ್ದ ಗೋಣಿಚೀಲದ ಬಂಡಲ್‌ಗಳನ್ನು ಪರಿಶೀಲಿಸಲಾಗಿ, ಶ್ರೀಗಂಧದ ತುಂಡುಗಳು ಮತ್ತು ಬೇರುಗಳನ್ನು ತುಂಬಿದ್ದು, ಅದಕ್ಕೆ ಡಿ.ಡಿ.ಟಿ ಪುಡಿಯನ್ನು ಸಿಂಪಡಿಸಿ ಶ್ರೀಗಂಧದ ವಾಸನೆ ಬಾರದಂತೆ ಮಾಡಲಾಗಿರುತ್ತದೆ. ನಂತರ ಶ್ರೀಗಂಧದ ಬಂಡಲ್‌ಗಳನ್ನು ಎಣಿಕೆ ಮಾಡಲಾಗಿ, ಒಟ್ಟು ಆರು ಬಂಡಲ್‌ಗಳು ಇದ್ದು, ಶ್ರೀಗಂಧದ ಒಟ್ಟು ತೂಕ 200 ಕೆ.ಜಿ ಇರುತ್ತದೆ. ಅಕ್ರಮವಾಗಿ ಶ್ರೀಗಂಧವನ್ನು ಯಾರೋ ಆಸಾಮಿಗಳು ಸಾಗಣೆ ಮಾಡುವಾಗ ಇಲಾಖಾ ಸಿಬ್ಬಂದಿಯನ್ನು ಕಂಡು ಅಲ್ಲಿಯೇ ಬಿಟ್ಟು ಹೋಗಿರಬಹುದೆಂದು ಶಂಕಿಸಿ, ಸೂಕ್ತ ರಹದಾರಿ ಇಲ್ಲದೇ ಶ್ರೀಗಂಧವನ್ನು ದಾಸ್ತಾನು ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಪ್ರಕಾರ ಅಕ್ರಮವಾಗಿರುವುದರಿಂದ ಸದರಿ ಶ್ರೀಗಂಧವನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಹೆಚ್ಚಿನ ತನಿಖೆಗಾಗಿ 200 ಕೆ.ಜಿ ಶ್ರೀಗಂಧವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಸಂಚಾರಿ ದಳದ ದಾಸ್ತಾನು ಮಳಿಗೆಯಲ್ಲಿ ಇಡಲಾಗಿರುತ್ತದೆ.

2. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಶ್ರೀಗಂಧವನ್ನು ದಾಸ್ತಾನು ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 87ರ ಉಲ್ಲಂಘನೆಯಾಗಿದ್ದು, ಸದರಿ ಕಾಯ್ದೆಯ ಸೆಕ್ಷನ್ 71ಎ ರಡಿಯಲ್ಲಿ ಕ್ರಮ ಜರುಗಿಸಲು ಹಾಗೂ ಆರೋಪಿಗಳು ಪತ್ತೆಯಾಗದೇ ಇರುವ ಕಾರಣ, ಅಮಾನತ್ತುಪಡಿಸಿಕೊಂಡಿರುವ 200 ಕೆ.ಜಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಕೆ.ಯು.ಪೋತಪ್ಪ ಬಿನ್ ಲೇಟ್ ಶ್ರೀ.ಕೆ.ಯು.ಅಂಬಣ್ಣ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ), ಶ್ರೀ.ಟಿ.ನಾರಾಯಣಪ್ಪ ಬಿನ್ ಶ್ರೀ.ತಿಮ್ಮಯ್ಯ, ವಲಯ ಅರಣ್ಯಾಧಿಕಾರಿ (ಅಂದಿನ ವನಪಾಲಕ) ಹಾಗೂ ಶ್ರೀ.ಹೆಚ್.ಶಿವಾನಂದ್ ಬಿನ್ ಶ್ರೀ.ಹೊನ್ನಯ್ಯ, ವನಪಾಲಕ (ಅಂದಿನ ಅರಣ್ಯ ರಕ್ಷಕ) ಇವರುಗಳ ಮುಖ್ಯ ವಿಚಾರಣೆಯನ್ನು ಶ್ರೀ.ರವಿಕುಮಾರ್, ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:16–09–2011ರಂದು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ನಡೆಸಿರುತ್ತಾರೆ.

4. ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಬಿ.ರಾಜು, ವಲಯ ಅರಣ್ಯಾಧಿಕಾರಿ, ಶ್ರೀ.ಸಿದ್ದಪ್ಪ.ಎಂ, ಅರಣ್ಯ ರಕ್ಷಕ ಹಾಗೂ ಶ್ರೀ.ಪಿ.ಹೆಚ್.ಪ್ರಭಾಕರ್, ಅರಣ್ಯ ರಕ್ಷಕ ಇವರು ಗೈರು ಹಾಜರಾದ ಕಾರಣ ವಿಚಾರಣೆಗೆ ಒಳಪಡಿಸಲಾಗಿರುವುದಿಲ್ಲ. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಪ್ರಕರಣದಲ್ಲಿ 200 ಕೆ.ಜಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಗೈರು ಹಾಜರಿರುವ ಸಾಕ್ಷಿಗಳ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಆರೋಪಿಗಳು ಪತ್ತೆಯಾಗದೇ ಇರುವುದರಿಂದ ಹಾಗೂ ಪ್ರತಿವಾದಿಗಳು ಹಾಜರಿರದ ಕಾರಣ ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 200 ಕೆ.ಜಿ ಶ್ರೀಗಂಧದ ತುಂಡು ಹಾಗೂ ಬೇರುಗಳನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87 ರ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 200 ಕೆ.ಜಿ ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:15–06–1990ರಂದು ಮೈಸೂರು ರಸ್ತೆ ವಾಣಿಜ್ಯ ತೆರಿಗೆ ಠಾಣೆಯ ಬಳಿ ಸುಮಾರು ಒಂದು ಫರ್‌ಲಾಂಗ್ ದೂರದ ರಸ್ತೆ ಬದಿಯಲ್ಲಿ ಗೋಣಿಚೀಲದ ಬಂಡಲ್‌ಗಳಲ್ಲಿ ಶ್ರೀಗಂಧದ ತುಂಡುಗಳು ಮತ್ತು ಬೇರುಗಳನ್ನು ತುಂಬಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 87ರ ಉಲ್ಲಂಘನೆಯಾಗಿರುತ್ತದೆ. ಶ್ರೀಗಂಧವನ್ನು ದಾಸ್ತಾನು ಮಾಡಿರುವ ವ್ಯಕ್ತಿಗಳು ಪತ್ತೆಯಾಗಿರುವುದಿಲ್ಲ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 84ರ ಮೇರೆಗೆ ಶ್ರೀಗಂಧವು ರಾಜ್ಯ ಸರ್ಕಾರದ ಸ್ವತ್ತಾಗಿದ್ದು, ಅದರ ಮಾಲೀಕತ್ವವು ಸಾಬೀತಾಗುವವರೆಗೆ ರಾಜ್ಯ ಸರ್ಕಾರದ ಸ್ವತ್ತೆಂದು ಪರಿಗಣಿಸಬೇಕಾಗಿರುತ್ತದೆ. ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಶ್ರೀಗಂಧವನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಒಟ್ಟು 200 ಕೆ.ಜಿ ಶ್ರೀಗಂಧದ ತುಂಡು ಹಾಗೂ ಬೇರುಗಳು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 84ರ ಮೇರೆಗೆ ಸರ್ಕಾರಿ ಸ್ವತ್ತಾಗಿದ್ದು, ಸೆಕ್ಷನ್ 87ರ ಉಲ್ಲಂಘನೆ ಆಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಸರ್ಕಾರ ಸ್ವತ್ತಾದ 200 ಕೆ.ಜಿ ಶ್ರೀಗಂಧದ ತುಂಡು ಹಾಗೂ ಬೇರುಗಳನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಶ್ರೀಗಂಧವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

**ಆದೇಶ**

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:62/1990–91ರಲ್ಲಿ ಅಮಾನತ್ತುಪಡಿಸಿಕೊಂಡಿರುವ 200 ಕೆ.ಜಿ ಶ್ರೀಗಂಧದ ತುಂಡು ಹಾಗೂ ಬೇರುಗಳನ್ನುಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:20–12–2011ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ,**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು

**ಪಿ.ಆರ್. 243**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ.**

**ಎಫ್.ಓ.ಸಿ ಸಂಖ್ಯೆ:112/2007-08 ದಿನಾಂಕ:13/01/2008.**

àNVÌH1.AA¿Ï.**71A.112/07-08,** º¼ñNPÌ **20/12/2011**

**ಉಪಸ್ಥಿತರು : ಶ್ರೀ.ಕೆ.ಬಿ.ಮಂಜುನಾಥ**, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು

ÀNïïñÌ º : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು

ApÌ ¹ñÊÊô Ì BÊöóÀYçô : ಪತ್ತೆಯಾಗಿರುವುದಿಲ್ಲ.

¿ÍPÊ§ದ ÔôôVñÌNÙYçôÌ

1. ದಿನಾಂಕ:13–01–2008ರಂದು ಖಚಿತ ಮಾಹಿತಿಯ ಮೇರೆಗೆ ಅರಣ್ಯ ಸಂಚಾರಿ ದಳದ ಸಿಬ್ಬಂದಿಗಳು ಚನ್ನಪಟ್ಟಣ ತಾಲ್ಲೂಕು, ಷಾ ಕಾಲೋನಿಯ ಷಾ ರೋಡ್‌ನಲ್ಲಿರುವ ಈದ್ಗಾ ಮೈದಾನದ ಈದ್ಗಾ ಸಂಸ್ಥೆಯ ಖಾಲಿ ಸ್ಥಳಕ್ಕೆ ಭೇಟಿ ನೀಡಿ ಸ್ಥಳ ಪರಿಶೀಲಿಸಲಾಗಿ, ಅಕ್ರಮವಾಗಿ ಬೀಟೆ ಮರದ ತುಂಡುಗಳನ್ನು ಶೇಖರಿಸಿಟ್ಟಿರುವುದು ಕಂಡುಬಂದಿರುತ್ತದೆ. ಇದಕ್ಕೆ ಸಂಬಂಧಪಟ್ಟವರು ಯಾರೂ ಸಹ ಸ್ಥಳದಲ್ಲಿ ಇಲ್ಲದಿದ್ದಕಾರಣ, ಸ್ಥಳೀಯರ ಬಳಿ ವಿಚಾರಿಸಲಾಗಿ, ಶೇಖರಿಸಿಟ್ಟಿದ್ದ ಮಾಲಿನ ವಾರಸುದಾರರು ಯಾರೆಂಬುದು ತಿಳಿದುಬಂದಿರುವುದಿಲ್ಲ. ಸದರಿ ಬೀಟೆ ಮರದ ತುಂಡುಗಳನ್ನು ಅಳತೆ ಮಾಡಲಾಗಿ, 21 ತುಂಡುಗಳಿದ್ದು, ಇವುಗಳ ಒಟ್ಟು ಅಳತೆ 2.098 ಘನ ಮೀಟರ್ ಆಗಿದ್ದು, ಈ ಬಗ್ಗೆ ಹೆಚ್ಚಿನ ತನಿಖೆ ಕೈಗೊಳ್ಳಲು ಈದ್ಗಾ ಸಂಸ್ಥೆಯವರನ್ನು ಹಾಗೂ ಸ್ಥಳೀಯರನ್ನು ವಿಚಾರಿಸಲಾಗಿ, ಬೀಟೆ ಮರದ ತುಂಡುಗಳನ್ನು ದಾಸ್ತಾನಿಟ್ಟಿರುವ ಬಗ್ಗೆ ಯಾವುದೇ ಮಾಹಿತಿ ನೀಡಿರುವುದಿಲ್ಲ ಹಾಗೂ ಇದಕ್ಕೆ ಸಂಬಂಧಿಸಿದ ವಾರಸುದಾರರೂ ಸಹ ಯಾರು ಮುಂದೆ ಬಂದಿರುವುದಿಲ್ಲ. ಸೂಕ್ತ ರಹದಾರಿ ಇಲ್ಲದೇ ಬೀಟೆ ಮರದ ತುಂಡುಗಳನ್ನು ದಾಸ್ತಾನು ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆ 1963ರ ಪ್ರಕಾರ ಅಕ್ರಮವಾಗಿರುವುದರಿಂದ ಸದರಿ 21 ಬೀಟೆ ಮರದ ತುಂಡುಗಳನ್ನು ಮಹಜರ್ ಸಹಿತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಅರಣ್ಯ ಅಪರಾಧ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ ಮತ್ತು ಹೆಚ್ಚಿನ ತನಿಖೆಗಾಗಿ ಜಪ್ತು ಮಾಡಲಾದ ಮಾಲನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ರಾಮನಗರ ವಲಯಕ್ಕೆ ನೀಡಲಾಗಿದೆ.

2. ಸೂಕ್ತ ರಹದಾರಿ ಇಲ್ಲದೇ ಅಕ್ರಮವಾಗಿ ಬೀಟೆ ಮರದ ತುಂಡುಗಳನ್ನು ದಾಸ್ತಾನು ಮಾಡುವುದು ಕರ್ನಾಟಕ ಅರಣ್ಯ ಕಾಯ್ದೆಯ ಉಲ್ಲಂಘನೆಯಾಗಿದ್ದು, ಆರೋಪಿಗಳು ಪತ್ತೆಯಾಗದೇ ಇರುವ ಕಾರಣ, ಅಮಾನತ್ತುಪಡಿಸಿಕೊಂಡಿರುವ ಬೀಟೆ ಮರದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರನ್ನು ಕೋರಿರುತ್ತಾರೆ.

3. ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಆರ್.ತಿಪ್ಪೇಸ್ವಾಮಿ ಬಿನ್ ಶ್ರೀ.ದೊಡ್ಡಬಸಪ್ಪ, ವಲಯ ಅರಣ್ಯಾಧಿಕಾರಿ ಇವರ ಮುಖ್ಯ ವಿಚಾರಣೆಯನ್ನು ಶ್ರೀ.ರವಿಕುಮಾರ್, ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:16–09–2011ರಂದು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ನಡೆಸಿರುತ್ತಾರೆ.

4. ಸರ್ಕಾರಿ ಪರ ಸಾಕ್ಷಿಗಳಾದ ಶ್ರೀ.ಆರ್.ನಾರಾಯಣ, ವನಪಾಲಕ ಹಾಗೂ ಶ್ರೀ.ಎಸ್.ಕೆ.ರವಿ, ಅರಣ್ಯ ರಕ್ಷಕ ಇವರು ಗೈರು ಹಾಜರಾದ ಕಾರಣ ವಿಚಾರಣೆಗೆ ಒಳಪಡಿಸಲಾಗಿರುವುದಿಲ್ಲ. ಹಾಜರಿದ್ದ ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳ ಪ್ರಕಾರ ಪ್ರಕರಣದಲ್ಲಿ ಒಟ್ಟು 2.098 ಘನ ಮೀಟರ್ ಬೀಟೆ ಮರದ ತುಂಡುಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಗೈರು ಹಾಜರಿರುವ ಸಾಕ್ಷಿಗಳ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ.

5. ಸರ್ಕಾರಿ ಸಾಕ್ಷಿಗಳು ನೀಡಿರುವ ಹೇಳಿಕೆಗಳು ಮತ್ತು ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಆಧರಿಸಿ ಸರ್ಕಾರಿ ವಕೀಲರು ವಾದವನ್ನು ಮಂಡಿಸಿರುತ್ತಾರೆ. ಸರ್ಕಾರಿ ವಕೀಲರ ವಾದ ಹಾಗೂ ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಆರೋಪಿಗಳು ಪತ್ತೆಯಾಗದೇ ಇರುವುದರಿಂದ ಹಾಗೂ ಪ್ರತಿವಾದಿಗಳು ಹಾಜರಿರದ ಕಾರಣ ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆದಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

6(1) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 2.098 ಘನ ಮೀಟರ್ ಬೀಟೆ ಮರದ ತುಂಡುಗಳನ್ನು ದಾಸ್ತಾನು ಮಾಡಿರುವುದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 104 ಎ ಮತ್ತು ನಿಯಮ 1969 ರ ನಿಯಮ 144 ಗಳ ಉಲ್ಲಂಘನೆಯಾಗಿದೆಯೇ?

6(2) ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಳ್ಳಲಾಗಿರುವ ಒಟ್ಟು 2.098 ಘನ ಮೀಟರ್ ಬೀಟೆ ಮರದ ತುಂಡುಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?

6(3) ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ?

ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.

6(4) ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(5) ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.

6(6) ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

7. ದಿನಾಂಕ:13–01–2008ರಂದು ಚನ್ನಪಟ್ಟಣ ತಾಲ್ಲೂಕು, ಷಾ ಕಾಲೋನಿಯ ಷಾ ರೋಡ್‌ನಲ್ಲಿರುವ ಈದ್ಗಾ ಮೈದಾನದ ಈದ್ಗಾ ಸಂಸ್ಥೆಯ ಖಾಲಿ ಸ್ಥಳದಲ್ಲಿ ಅಕ್ರಮವಾಗಿ ಬೀಟೆ ಮರದ ತುಂಡುಗಳನ್ನು ಶೇಖರಿಸಿಟ್ಟಿರುವುದು. ಕರ್ನಾಟಕ ಅರಣ್ಯ ಕಾಯ್ದೆ 1963 ರ ಪ್ರಕಾರ ಬೀಟೆ ಮರದ ತುಂಡುಗಳನ್ನು ದಾಸ್ತಾನು ಮಾಡಲು ಇರಬೇಕಾದ ರಹದಾರಿ ಮತ್ತು ಸಂಬಂಧಪಟ್ಟ ದಾಖಲೆಗಳು ಸದರಿ ಸ್ಥಳದಲ್ಲಿ ದೊರಕದೇ ಇರುವುದರಿಂದ ಮತ್ತು ಸದರಿ ಮಾಲಿನ ವಾರಸುದಾರರು ಯಾರೆಂಬುದು ಪತ್ತೆಯಾಗದ ಕಾರಣ ಅರಣ್ಯ ಮೊಕದ್ದಮೆಯು ದಾಖಲಾಗಿದ್ದು, ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯು ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಸರ್ಕಾರಿ ಪರ ಸಾಕ್ಷಿಗಳು ಸಹ ಸದರಿ ಬೀಟೆ ಮರದ ತುಂಡುಗಳನ್ನು ಅಕ್ರಮವಾಗಿ ದಾಸ್ತಾನು ಮಾಡಿರುವುದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ನಿಯಮ 1969ರ ಉಲ್ಲಂಘನೆಯಾಗಿರುವುದು ಖಾತರಿಯಾಗಿರುತ್ತದೆ.

8. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 80 ರ ಮೇರೆಗೆ ಅರಣ್ಯೋತ್ಪನ್ನಗಳ ಮಾಲೀಕತ್ವವು ರುಜುವಾತು ಆಗುವವರೆಗೆ ಅವು ಸರ್ಕಾರದ ಸ್ವತ್ತೆಂದು ಭಾವಿಸಲಾಗುವುದು. ಸದರಿ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡಿರುವ ಒಟ್ಟು 2.098 ಘನ ಮೀಟರ್ ಬೀಟೆ ಮರದ ತುಂಡುಗಳನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಲಾಗಿದೆ. ಸದರಿ ಮಾಲಿನ ವಾರಸುದಾರರು ಪತ್ತೆಯಾಗಿರುವುದಿಲ್ಲವೆಂದು ವಿಚಾರಣಾ ಸಮಯದಲ್ಲಿ ಸರ್ಕಾರಿ ಪರ ಸಾಕ್ಷಿ ನೀಡಲಾಗಿದೆ. ವಾರಸುದಾರರಿಲ್ಲದ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ಮಾಲನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

## ಆದೇಶ

ನಾನು ಕೆ.ಬಿ.ಮಂಜುನಾಥ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:112/2007–08ರಲ್ಲಿ ಅಮಾನತ್ತುಪಡಿಸಿಕೊಂಡಿರುವ 21 ಬೀಟೆ ಮರದ ತುಂಡುಗಳು ಒಟ್ಟು 2.098 ಘನ ಮೀಟರ್‌ಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ:20–12–2011ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಕೆ.ಬಿ.ಮಂಜುನಾಥ,**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಅರಣ್ಯ ಸಂಚಾರಿ ದಳ, ಬೆಂಗಳೂರು

**ಪಿ.ಆರ್. 244**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ:ಕಾನಪ:ಎಫ್/ಎಸ್ಆರ್-03/2012, ದಿನಾಂಕ:13-01-2012**

**ಅರ್ಜಿದಾರರು :** **:ವಿರುದ್ಧ:** **ಪ್ರತಿವಾದಿಗಳು :**

ಅರ್ಜಿದಾರರು:

1) ಶ್ರೀಮತಿ ರಾಜೇಶ್ವರಿ ಕೋಂ ಲೇಟ್ ರಾಜು
2) ಶ್ರೀಮತಿ ಅಮ್ಮಣ್ಣಮ್ಮ ಕೋಂ ಲೇಟ್ ನಿಂಗಯ್ಯ,
3) ಸುಪ್ರೀತಾ ಬಿನ್ ಲೇಟ್ ರಾಜು
4) ಕೀರ್ತಿ ಬಿನ್ ಲೇಟ್ ರಾಜು,
5) ಅಜಂತಾ ಬಿನ ಲೇಟ್ ರಾಜು

ವಾಸ : ಮಧುರನಹಳ್ಳಿ, ರಾಮನಾಥಪುರ ಮಾರ್ಗ,
ಅರಕಲಗೂಡು ತಾ:, ಹಾಸನ ಜಿಲ್ಲೆ.

ಪ್ರತಿವಾದಿಗಳು:

1) ಶ್ರೀ ಕೆ.ವಿ.ಪ್ರವೀಣ್ ಬಿನ್ ಕೆ.ಕೆ.ವಾಸುದೇವ್,
ಕೂಡಿಗೆ ಹೆಗ್ಗದ್ದಹಳ್ಳಿ ಗ್ರಾಮ, ಕುಶಾಲನಗರ ಹೋಬಳಿ,
ಸೋಮವಾರಪೇಟೆ ತಾ: ಕೊಡಗು ಜಿಲ್ಲೆ.

2) ದಿ ಮ್ಯಾನೇಜರ್, ಬಜಾಜ್ ಅಲಿಯಾನ್ಸ್ ಜನರಲ್ ಇನ್ಶ್ಯೂರೆನ್ಸ್
ಕಂ.ಲಿ., ಬಿ.ಎಸ್.ಎನ್.ಎಲ್.ಬಿಲ್ಡಿಂಗ್,
ಬಿ.ಎಂ.ರಸ್ತೆ, ಹಾಸನ

**: ಪ್ರಕಟಣೆ :**

ಸಾರ್ವಜನಿಕರಿಗೆ ಮತ್ತು ಸಂಬಂದಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ರಾಜು ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:15-05-2011ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್.ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

**ಪಿ.ಆರ್. 67**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ:ಕಾನಪ:ಎಫ್/ಎಸ್ಆರ್-04/2012, ದಿನಾಂಕ:13-01-2012**

**ಅರ್ಜಿದಾರರು :** **:ವಿರುದ್ಧ:** **ಪ್ರತಿವಾದಿಗಳು :**

ಅರ್ಜಿದಾರರು:

1) ಶ್ರೀ ಭಾಳೇಗೌಡ ಬಿನ್ ರಾಮೇಗೌಡ ಬಿನ್ ರಾಮೇಗೌಡ
2) ಶ್ರೀಮತಿ ಸಣ್ಣಮ್ಮ ಕೋಂ ಬಾಳೇಗೌಡ
**ವಾಸ :** ಹಂಡ್ರಂಗಿ ಗ್ರಾಮ, ಕೊಣನೂರು ಹೋಬಳಿ
ಅರಕಲಗೂಡು ತಾ: ಹಾಸನ ಜಿಲ್ಲೆ,

ಪ್ರತಿವಾದಿಗಳು:

1. ಶ್ರೀ ರೇವಣ್ಣ ಬಿನ್ ದೇವೇಗೌಡ,
ಅಂಕವಳ್ಳಿ ಗ್ರಾಮ, ಹೊಳೆನರಸೀಪುರ ತಾ:
2. ದಿ ರಿಲೈಯನ್ಸ್ ಜನರಲ್ ಇನ್ಸುರೆನ್ಸ್ ಕಂ ಲಿ.,
ಹೆಚ್.ಎನ್.ಪುರ ರೋಡ್, ಹಾಸನ
3. ಶ್ರೀ ಮಧು ಪ್ರಸಾದ್ ಬಿನ್ ನಂಜುಂಡಪ್ಪ,
ಕಲಾಸಿಪಾಳ್ಯ, ಬೆಂಗಳೂರು-560002
4. ಮೆ: ಐಸಿಐಸಿಐ ಜನರಲ್ ಇನ್ಸುರೆನ್ಸ್ ಕಂ ಲಿ., ಮುಂಬೈ,
ಪ್ರತಿನಿಧಿಸುವವರು : ಹಾಸನ ಶಾಖೆ.

**: ಪ್ರಕಟಣೆ :**

ಸಾರ್ವಜನಿಕರಿಗೆ ಮತ್ತು ಸಂಬಂದಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಹೆಚ್.ಬಿ.ಸುಧೀರ್ ಬಿನ್ ಭಾಳೇಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 10/11-09-2011ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ

ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್.ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

**ಪಿ.ಆರ್. 68**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ:ಕಾನಪ:ಎಫ್/ಎಸ್ಆರ್–05/2012, ದಿನಾಂಕ:13–01–2012**

**ಅರ್ಜಿದಾರರು :** :ವಿರುದ್ಧ: **ಪ್ರತಿವಾದಿಗಳು :**

1. ಶ್ರೀ ಮಂಜುನಾಥ್ ಬಿನ್ ರಾಮಶೆಟ್ಟಿ,
2. ಶ್ರೀಮತಿ ಕೋಂ ಮಂಜುನಾಥ್,

**ವಾಸ :** ಕೋಗರವಳ್ಳಿ ಗ್ರಾಮ,
ಕಬ್ಬಿನಗದ್ದೆ, ಕಸಬಾ ಹೋಬಳಿ,
ಸಕಲೇಶಪುರ ತಾಲ್ಲೂಕು.

ಶ್ರೀ ಹೆಚ್.ಬಿ.ನಿರೂಪ್‌ಕುಮಾರ್
ಬಿನ್ ಧರ್ಮಪ್ಪ, ಪುಷ್ಪಗಿರಿ ಎಸ್ಟೇಟ್,
ಹಳೆಕೆರೆ ಗ್ರಾಮ, ಜಮ್ಮನಹಳ್ಳಿ ಅಂಚೆ, ಬೆಳಗೋಡು,

**: ಪ್ರಕಟಣೆ :**

ಸಾರ್ವಜನಿಕರಿಗೆ ಮತ್ತು ಸಂಬಂದಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಅರುಣ್‌ಕುಮಾರ್ ಬಿನ್ ಮಂಜುನಾಥ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 25–04–2011 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್.ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

**ಪಿ.ಆರ್. 69**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ:ಕಾನಪ:ಎಸ್ಆರ್:ಎಫ್:06:2012, ದಿನಾಂಕ:20–01–2012**

**ಅರ್ಜಿದಾರರು :** :ವಿರುದ್ಧ: **ಪ್ರತಿವಾದಿಗಳು :**

1) ಶ್ರೀಮತಿ ರತ್ನ @ ರತ್ನಮ್ಮ ಕೋಂ ಲೇಟ್ ಗುರಪ್ಪ
2) ಸುಜಾತ ಬಿನ್ ಲೇಟ್ ಗುರಪ್ಪ
3) ಲಕ್ಷ್ಮಿ ಬಿನ್ ಲೇಟ್ ಗುರಪ್ಪ
4) ರಘು ಬಿನ್ ಲೇಟ್ ಗುರಪ್ಪ

ನಂದೀಪುರ ಎಸ್ಟೇಟ್, ಹೈದೂರು ಗ್ರಾಮ, ಆಲೂರು ತಾ:

ಮೋಹನೇಶ್ವರ ಬಿನ್ ಲೇಟ್ ಸಿದ್ಧಲಿಂಗಪ್ಪ
ನಂದೀಪುರ ಎಸ್ಟೇಟ್, ಹೈದೂರು ಗ್ರಾಮ,
ಕುಣಿಗನಹಳ್ಳಿ ಅಂಚೆ, ಆಲೂರು ತಾ:

**: ಪ್ರಕಟಣೆ :**

ಸಾರ್ವಜನಿಕರಿಗೆ ಮತ್ತು ಸಂಬಂದಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಗುರಪ್ಪ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:05–07–2011 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್.ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಬಾಗ, ಹಾಸನ.

**ಪಿ.ಆರ್. 115**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ:ಕಾನಪ:ಎಫ್/ಎಸ್‌ಆರ್–01:2012 ದಿನಾಂಕ:03–01–2012**

**ಅರ್ಜಿದಾರರು :** :ವಿರುದ್ಧ: **ಪ್ರತಿವಾದಿಗಳು :**

1) ಶ್ರೀಮತಿ ರತ್ನಮ್ಮ ಕೋಂ ಲೇಟ್ ಮುದ್ದೇಗೌಡ
2) ಪುಟ್ಟಸ್ವಾಮಿಗೌಡ ಬಿನ್ ಲೇಟ್ ಯಜಮಾನ್ ಕಾಳೇಗೌಡ
3) ಶ್ರೀಮತಿ ಗೌರಮ್ಮ ಕೋಂ ಪುಟ್ಟಸ್ವಾಮಿಗೌಡ

**ವಾಸ:** ದೊಡ್ಡಹಳ್ಳಿ ಗ್ರಾಮ ಮತ್ತು ಅಂಚೆ,
ಹಳ್ಳಿಮೈಸೂರು ಹೋಬಳಿ, ಹೊಳೇನರಸೀಪುರ ತಾ:

1) ಶ್ರೀ ಡಿ.ಸಿ.ಕಾಂತರಾಜು ಬಿನ್ ಚಿಕ್ಕೇಗೌಡ
ದೊಡ್ಡಹಳ್ಳಿ ಗ್ರಾಮ ಮತ್ತು ಅಂಚೆ, ಹಳ್ಳಿ ಮೈಸೂರು ಹೋಬಳಿ,
ಹೊಳೇನರಸೀಪುರ ತಾ:

2) ಶಾಖಾ ವ್ಯವಸ್ಥಾಪಕರು, ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ.ಲಿ.,
ಶ್ರೀ ಮಂಜುನಾಥೇಶ್ವರ ಕಾಂಪ್ಲೆಕ್ಸ್, ಪಿ.ಬಿ.ನಂ.112,ಬಸ್‌ಸ್ಟ್ಯಾಂಡ್ ರಸ್ತೆ,
ಹಾಸನ.

**: ಪ್ರಕಟಣೆ :**

ಸಾರ್ವಜನಿಕರಿಗೆ ಮತ್ತು ಸಂಬಂದಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ರವಿಕುಮಾರ್ ಬಿನ್ ಲೇಟ್ ಮುದ್ದೇಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 29–09–2010 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್.ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಬಾಗ, ಹಾಸನ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ:ಕಾನಪ:ಎಫ್/ಎಸ್‌ಆರ್–02/2012, ದಿನಾಂಕ:03–01–2012**

**ಅರ್ಜಿದಾರರು :** :ವಿರುದ್ಧ: **ಪ್ರತಿವಾದಿಗಳು :**

1) ಶ್ರೀ ನಾರಾಯಣಗೌಡ ಬಿನ್ ಬೀಮೇಗೌಡ
2) ಶ್ರೀಮತಿ ಕರಿಯಮ್ಮ @ ತಂಗ್ಯಮ್ಮ
ಕೋಂ ನಾರಾಯಣಗೌಡ

**ವಾಸ :** ನಿಡುಡಿ ಗ್ರಾಮ, ದೊಡ್ಡಮರ ಅಂಚೆ,
ಕಸಬಾ ಹೋಬಳಿ, ಹಾಸನ ತಾ:

1) ಶ್ರೀ ಚಂದ್ರೇಗೌಡ ಬಿನ್ ದೇವೇಗೌಡ, ನಿಡುಡಿ ಗ್ರಾಮ,
ದೊಡ್ಡಮರ ಅಂಚೆ, ಕಸಬಾ ಹೋಬಳಿ, ಹಾಸನ ತಾ:
2) ವ್ಯವಸ್ಥಾಪಕರು, ಬಜಾಜ್ ಅಲಿಯಾನ್ಸ್
ಜನರಲ್ ಇನ್‌ಶ್ಯೂರೆನ್ಸ್ ಕಂ.ಲಿ., ಪುಣೆ.
ಪ್ರತಿನಿಧಿ ಶಾಖೆ: ಹಾಸನ

: ಪ್ರಕಟಣೆ :

ಸಾರ್ವಜನಿಕರಿಗೆ ಮತ್ತು ಸಂಬಂದಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಗಂಗರಾಜ ಬಿನ್ ನಾರಾಯಣಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 26-05-2011ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್.ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

**ಪಿ.ಆರ್. 04**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ

**ಸಂಖ್ಯೆ:ಕಾನಪ:ಎಫ್:ಎಸ್ಆರ್-33:2011, ದಿನಾಂಕ:30-12-2011**

| ಅರ್ಜಿದಾರರು : | :ವಿರುದ್ಧ: | ಪ್ರತಿವಾದಿಗಳು : |
|---|---|---|
| 1. ಶೀಲಾ ಬಿನ್ ಲೇಟ್ ತೌಡಾ, | | 1. ಶ್ರೀ ರವಿಜಲನ್ ಬಿನ್ ರಾಮಾವತರ್ |
| 2. ತೀರ್ಥ ಬಿನ್ ಲೇಟ್ ತೌಡಾ, | | ಜಲನ್‌ರಾಜ್, ಬಿಜಯಾ ನ್ಯೂ ರೋಡ್, |
| ವಾಸ : ಅನಗಳಲೆ ಕೆ. ಹೊಸಕೋಟೆ ಹೋಬಳಿ, | | ರವಿಜಲನ್ ಪ್ರಸಾದ್ ಮಂಗಳೂರು-4 |
| ಆಲೂರು ತಾ: ಹಾಸನ ಜಿಲ್ಲೆ, | | 2. ದಿ ಡಿವಿಜನಲ್ ಮ್ಯಾನೇಜರ್, |
| **ಹಾಲಿವಾಸ** : ಬಂದಿಹಳ್ಳಿ ಬೆಳಗೋಡು, | | ದಿ ಓರಿಯಂಟಲ್ ಇನ್ಸುರೆನ್ಸ್ ಕಂ ಲಿ., ಮಂಗಳೂರು |
| ಬೆಳಗೋಡು ಹೋಬಳಿ, | | |
| ಸಕಲೇಶಪುರ ತಾ: | | ಪ್ರತಿನಿಧಿಸುವವರು : ಹಾಸನ ಶಾಖೆ. |

: ಪ್ರಕಟಣೆ :

ಸಾರ್ವಜನಿಕರಿಗೆ ಮತ್ತು ಸಂಬಂದಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ತೌಡಕುಮಾರ್ @ ತೌಡಯ್ಯ ಕುಮಾರ್ @ ಕುಮಾರ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 30-03-2011 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್.ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

**ಪಿ.ಆರ್. 05**

## IN THE COURT OF 3RD ADDITIONAL CHIEF METROPOLITAN MAGISTRATE, BANGALORE CITY

It is hereby notified to the public that the Byatarayanapura Police Station, Bangalore have seized the following vehicles as unclaimed and such vehicles are lying in the Police Station as unclimed so far, I Hence the Owners of the properties (Vehicles) may put their claim within six month from the date of publication.

**III Additional Chief Metropolitan Magistrate, Bangalore,**

**List of the seized vehicles are lying in the Byatarayanapura Police Station, Bangalore city which have been seized under Cmiss No's**

| Sl. No | Cmiss No | P.F.No | Vehicle details | Chassis and Engine No.s |
|---|---|---|---|---|
| 1 | 172/11 | 49/11 | Kinetic Nova KA-06-A-6916 | Chasis No : 025291<br>Engine No : 025010 |
| 2 | -Do- | -Do- | Kinetic Y2K KA02-A-696 | Chasis No : 848604<br>Engine No : 794644 |
| 3 | -Do- | -Do- | Kinetic Honda KA-04-S-5753 | Chasis No : 72840<br>Engine No : 786438 |
| 4 | 173/11 | 50/11 | Kinetic Honda CTE-65 | Chasis No : 610948<br>Engine No : 107969 |
| 5 | -Do- | -Do- | Kinetic Zoom No KA-03-EA-5792 | Chasis No : 90077866<br>Engine No : 067950 |
| 6 | -Do- | -Do- | Kinetic ZX Honda KA-01-S-63 | Chasis No : 060997<br>Engine No : 375724 |
| 7 | 174/11 | 51/11 | Kinetic Honda No KA-01-E-3886 | Engine No : 356406 |
| 8 | -Do- | -Do- | TVS Astra KA-05-K-9270 | Chasis No : F030043<br>Engine No : 11F810829 |
| 9 | 175/11 | 52/11 | TVS max 100, KA-05-EK-6346 | Chasis No : 335970<br>Engine No : 391973 |
| 10 | -Do- | -Do- | TVS Heavy duty KA-01-EA-9973 | Chasis No : 1862A91578<br>Engine No : 61639971 |
| 11 | 176/11 | 53/11 | Honda Activa KA-03-E-3730 | Chasis No : 004597<br>Engine No : E8203356 |
| 12 | -Do- | -Do- | Honda Activa KA-15-AE-4786 | Chasis No : 98143638<br>Engine No : 143675 |
| 13 | -Do- | -Do- | Kinitec Zoom KA-03-H-3956 | Chasis No : 234254<br>Engine No : 239818 |
| 14 | 177/11 | 54/11 | Hero Honda CT-100 no KA-04-X-4780 | Chasis No : F07493<br>Engine No : 15089 |

| Sl. No | Cmiss No | P.F.No | Vehicle details | Chassis and Engine No.s |
|---|---|---|---|---|
| 15 | -Do- | -Do- | Hero Honda CT-100, KA-05-W-6329 | Chasis No : F02208<br>Engine No : E05997 |
| 16 | 178/11 | 55/11 | Hero Honda splendor no number plate | Chasis No : 02992<br>Engine No : 03107 |
| 17 | -Do- | -Do- | Honda Activa KA-02-EK-6639 | Chasis No : 38385259<br>Engine No : 0344387 |
| 18 | -Do- | -Do- | Honda Activa KA-05-EJ-7584 | Chasis No : 28078476<br>Engine No : 0080728 |
| 19 | -Do- | -Do- | Hero Honda passion no Number plate | Chasis No : 08250<br>Engine No : 00617 |
| 20 | 179/11 | 56/11 | TVS champ no KA-06-352 | Chasis No : 280271 |
| 21 | -Do- | -Do- | TVS Heavy duty KA-41-H-4733 | Chasis No : 19647<br>Engine No : 29726 |
| 22 | -Do- | -Do- | TVS pep No KA-03-EL-7163 | Chasis No : A2679<br>Engine No : 42048566 |
| 23 | -Do- | -Do- | TVS heavy duty KA-04-EE-3325 | Chasis No : 1592A57845<br>Engine No : 9177850 |
| 24 | 809/11 | 180/11 | Suzuki No TN-21-S-0083 | Chasis No : 1008F7124234<br>Engine No : 1008M764103 |
| 25 | -Do- | -Do- | Crux no KA-09-EE-7531 | Chasis No : 05D56A 5002157<br>Engine No : 5KA5002157 |
| 26 | 810/11 | 181/11 | TVS Appache KA-43-J-4041 | Chasis No : MD634KE4 782D81365<br>Engine No : E4D82082637 |
| 27 | -Do- | -Do- | Bajaj Chetak KA-04-U-9476 | Engine No:35MBEBL34354 |
| 28 | -Do- | -Do- | Suzuki samurai no KA-05-Y-9236 | Chasis No : 7706F836282<br>Engine No : 7706M882201 |
| 29 | -Do- | -Do- | TVS 50 NO MEU-654 | NIl |
| 30 | 809A/11 | 182/11 | TVS victor KA-06-U-5271 | Chasis No : N3308F660178<br>Engine No : N3308M661706 |
| 31 | -Do- | -Do- | Samurai No KA-03-V-1689 | Chasis No : 7710F900222<br>Engine No : 7710M946642 |
| 32 | -Do- | -Do- | Star City no KA-02-EZ-5814 | Chasis No : MD625MF 5571F67940<br>Engine No : CF5F71025293 |
| 33 | 824/11 | 184/11 | Star city no KA-14-V-4472 | Chasis No : MD625KF 5572A55<br>Engine No : BF5P61046611 |

| Sl. No | Cmiss No | P.F.No | Vehicle details | Chassis and Engine No.s |
|---|---|---|---|---|
| 34 | -Do- | -Do- | Bajaj Chetak no CAP-6643 | Engine No : 009373 |
| 35 | -Do- | -Do- | Bajaj Chetak no KA-04-L-5477 | Chasis No : 06F95D04300<br>Engine No : 95D99853 |
| 36 | -Do- | -Do- | TVS victor KA-04-HP-7696 | Chasis No : MD625AF 1862C75401<br>Engine No : 0F1C61515524 |
| 37 | 825/11 | 185/11 | TVS XL no KA-05-EC-5764 | Chasis No : P3003F241659<br>Engine No : P1003M24005 |
| 38 | -Do- | -Do- | Kinetic Honda NO KA-03-Q-2316 | Chasis No : 570553<br>Engine No : 560409 |
| 39 | -Do- | -Do- | RX 100 no CRO-159 | Chasis No : 127845<br>Engine No : 127845 |
| 40 | 826/11 | 186/11 | Yamaha no KA-01-S-4811 | Chasis No : 101E4TL500/20<br>Engine No : 500120 |
| 41 | -Do- | -Do- | Suzuki Samurai no KA-02-EA-6349 | Chasis No : 7003F581622<br>Engine No : 7003M632795 |
| 42 | -Do- | -Do- | Bajaj pulsar KA-05-EM-439 | Chasis No : M0ZDHZZ NCC64274<br>Engine No : DHGBNL01645 |
| 43 | -Do- | -Do- | Chetak CNN-3657 | Engine No : 06B791439 |
| 44 | 832/11 | 188/11 | Auto rikshwa no Number plate | Chasis No : 24F94051339<br>Engine No : 24M94051025 |
| 45 | -Do- | -Do- | Auto rikshwa no KA-02-B-8727 | Chasis No : 24FBKF44025<br>Engine No : AEMBKF51488 |
| 46 | 836/11 | 191/11 | Yamaha YBX KA-02-X-2860 | Chasis No : 002639<br>Engine No : 4LS-00239 |
| 47 | -Do- | -Do- | TVS heavy duty KA-05-EJ-4346 | Chasis No : 581423<br>Engine No : 572897 |

**P R 47** **III Additional Chief Metropolitan Magistrate, Bangalore,**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:3:ಸಿಆರ್‌ಎಂ:4:1999-2000, ದಿ:6-1-2012**

ಉಪಸ್ಥಿತರು : **ಹೆಚ್.ಎನ್.ಆನಂದ್**, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

| ಫಿರ್ಯಾದುದಾರರು | ವಿರುದ್ಧ | ಆರೋಪಿ |
|---|---|---|
| ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾ ದಳ.<br>ಮಂಗಳೂರು. | | ಜಿ.ಎಸ್.ಪರಮೇಶ್ ಬಿನ್ ರಾಜಣ್ಣ ಕುಂಬೂರು ಗ್ರಾಮ,<br>ಮಾದಾಪುರ ಅಂಚೆ, ಸೋಮವಾರಪೇಟೆ ತಾಲ್ಲೂಕು<br>ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು:–**

ದಿ:28–4–99ರಂದು ರಾತ್ರಿ 8 ಗಂಟೆ ಸಮಯದಲ್ಲಿ ಮಡಿಕೇರಿ ಪಟ್ಟಣದ ಕುಶಾಲನಗರ ಮಡಿಕೇರಿ ರಸ್ತೆಯಲ್ಲಿ ಬರುವ ಸೋಮವಾರಪೇಟೆಗೆ ಹೋಗುವ ರಸ್ತೆಯ ಜಂಕ್ಷನ್ ಬಳಿ ಅಬಕಾರಿ ನಿರೀಕ್ಷಕರು(1), ಗುಪ್ತ ವಾರ್ತಾದಳ, ಮಂಗಳೂರು ಇವರು ತಮ್ಮ ಸಿಬ್ಬಂದಿ ಸಮೇತ ನಮೂದಿಸಿರುವ ಸ್ಥಳದಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಕುಶಾಲನಗರ ಕಡೆಯಿಂದ ಮಡಿಕೇರಿ ಕಡೆಗೆ ಬಂದ ಈಚರ್ ಕಂಪೆನಿಯ ವಾಹನವನ್ನು ನಿಲ್ಲಿಸುವಂತೆ ಸೂಚನೆ ನೀಡಲಾಗಿ ಸದರಿ ವಾಹನವನ್ನು ವಾಹನದ ಚಾಲಕನು ನಿಲ್ಲಿಸಿದನು. ವಾಹನದಲ್ಲಿ ಚಾಲಕನು ಒಬ್ಬನು ಮಾತ್ರ ಇದ್ದು, ಆತನನ್ನು ಸದರಿ ಅಧಿಕಾರಿಗಳು ವಾಹನದ ಒಳಗಡೆ ಏನಿದೆ ಎಂಬುದಾಗಿ ವಿಚಾರಿಸಲಾಗಿ ಆತನು ವಾಹನದ ಒಳಗಡೆ ಯಾವುದೇ ಸರಕು ಇರುವುದಿಲ್ಲ ಹಾಗೂ ಖಾಲಿ ಇರುವುದಾಗಿ ತಿಳಿಸಿದನು. ಆದರೆ ವಾಹನವು ಕಂಬಿ ಮತ್ತು ಟಾರ್ಪಲ್‌ನಿಂದ ಆವರಿಸಿದ್ದುದರಿಂದ ಇಲಾಖೆಯವರು ಅನುಮಾನದಿಂದ ವಾಹನದ ಒಳಗಡೆ ಪರಿಶೀಲಿಸಲಾಗಿ ವಾಹನದ ಒಳಗಿನ ಉದ್ದ ಅಳತೆಯು ಹೊರಗಿನ ಉದ್ದಳತೆಗಿಂತ ಕಡಿಮೆ ಇರುವುದರಿಂದ ಅನುಮಾನಗೊಂಡು ಒಳಗಡೆ ಸೂಕ್ಷ್ಮವಾಗಿ ಪರಿಶೀಲಿಸಿದಾಗ ವಾಹನ ಚಾಲಕನ ಹಿಂಭಾಗದಲ್ಲಿ(ಕ್ಯಾಬಿನ್ ಹಿಂಭಾಗದಲ್ಲಿ) ಪ್ರತ್ಯೇಕವಾಗಿ ಕಂಪಾರ್ಟ್‌ಮೆಂಟ್ ನಿರ್ಮಿಸಲಾಗಿತ್ತು. ಈ ಕಂಪಾರ್ಟ್‌ಮೆಂಟ್‌ನ್ನು ಚಾಲಕನಿಂದ ತೆರೆಯಿಸಿ ನೋಡಲಾಗಿ ಒಳಗಡೆ ರಟ್ಟಿನ ಪೆಟ್ಟಿಗೆಗಳು ಕಂಡುಬಂದಿದ್ದು, ಅವುಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಸೀಲು ಮಾಡಿದ ಮದ್ಯದ ಸೀಸೆಗಳು ಇರುವುದು ಕಂಡುಬಂದಿರುತ್ತದೆ. ಈ ರೀತಿ ಮದ್ಯದಿಂದ ತುಂಬಿದ ಮದ್ಯದ ರಟ್ಟಿನ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಲು ರಹದಾರಿ ವಗೈರೆ ಹಾಜರುಪಡಿಸುವಂತೆ ವಾಹನ ಚಾಲಕನಿಗೆ ಸದರಿ ಅಧಿಕಾರಿಯವರು ಕೇಳಲಾಗಿ ಆತನು ತನ್ನಲ್ಲಿ ಯಾವುದೇ ರಹದಾರಿ ಇಲ್ಲವೆಂದು ತಿಳಿಸಿರುತ್ತಾನೆ. ಯಾವುದೇ ರಹದಾರಿ ವಗೈರೆ ಇಲ್ಲದೆ ಮದ್ಯ ಸಾಗಾಣಿಕೆ ಮಾಡುವುದು ಅಬಕಾರಿ ಕಾನೂನುಗಳ ಉಲ್ಲಂಘನೆ ಎಂಬುದಾಗಿ ಸದರಿ ಅಧಿಕಾರಿಗಳು ವಾಹನದ ಚಾಲಕನಿಗೆ ತಿಳಿಸಿರುತ್ತಾರೆ. ಮುಂದಿನ ಕ್ರಮ ಕೈಗೊಳ್ಳಲು ಆ ಸ್ಥಳದಲ್ಲಿ ಪಂಚರು ಯಾರೂ ಸಿಗದ ಕಾರಣ ಇಲಾಖಾ ಸಿಬ್ಬಂದಿಗಳನ್ನೇ ಪಂಚರನ್ನಾಗಿಸಿಕೊಂಡು ಸದರಿ ದೊರೆತ ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಿ ಎಣಿಕೆ ಮಾಡಲಾಗಿ ದಾಸಪ್ಪಾಸ್ ಡಿ.ಡಿ.ಫೈನ್ ಬ್ರಾಂಡಿ 2832 x 180ಮಿಲಿಯ ಸೀಸೆಗಳಂತೆ ಒಟ್ಟು 59 ಪೆಟ್ಟಿಗೆಗಳು ಮತ್ತು ದಾಸಪ್ಪಾಸ್ ಡಿಡಿ ತ್ರಿಬಲ್ ಎಕ್ಸ್ ರಮ್ 2832 x 180ಮಿಲಿಯ ಸೀಸೆಗಳಂತೆ 59ಪೆಟ್ಟಿಗೆಗಳು ಅಂದರೆ ಒಟ್ಟು 118 ರಟ್ಟಿನ ಪೆಟ್ಟಿಗೆಗಳಿಂದ 1019.520ಲೀ. ಇವುಗಳಿಂದ 180ಮಿಲಿಯ ಒಟ್ಟು 26 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಮೊಹರು ಮಾಡಲಾಯಿತು. ಜಪ್ತು ಪಡಿಸಿಕೊಂಡ ಮದ್ಯ, ಲಾರಿ ಸಂ: ಕೆಎ–12–3301ರನ್ನು ಮತ್ತು ಲಾರಿಯ ಚಾಲಕನಾದ ಜಿ.ಎಸ್.ಪರಮೇಶ್ ಬಿನ್ ರಾಜಣ್ಣ, ಇವರನ್ನು ದಸ್ತಗಿರಿ ಮಾಡಿ ಮದ್ಯ ಸಮೇತ ಲಾರಿಯನ್ನು ವಶಕ್ಕೆ ತೆಗೆದುಕೊಳ್ಳಲಾಗಿರುತ್ತದೆ. ನಂತರ ವಾಹನದ ಚಾಲಕ, ಮಾಲೀಕ ಮತ್ತು ಡಿಸ್ಟಿಲ್ಲರಿ ಮಾಲೀಕರ ವಿರುದ್ಧ ಅಬಕಾರಿ ಕಾಯ್ದೆ ಕಲಂ 11, 14(2), 34, 38(ಎ)ರ ಪ್ರಕಾರ ಪ್ರ.ವ.ವ.ಸಂ:27/98–99, ದಿ:28–4–99ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಮುಂದಿನ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಸಂಬಂಧ ವಾಹನದ ಮಾಲೀಕರಾದ ಶ್ರೀ ಬಿ.ಪಿ.ಸುರೇಶ, ಬಿಳಿಗೇರಿ ಗ್ರಾಮ, ಸೋಮವಾರಪೇಟೆ ತಾಲ್ಲೂಕು ಇವರಿಗೆ 43(ಬಿ)ರಡಿಯಲ್ಲಿ ಕಾರಣ ಕೇಳಿ ನೋಟಿಸನ್ನು ದಿ:7–5–99ರಂದು ನೀಡಲಾಗಿರುತ್ತದೆ. ನಂತರ ದಿ:11–5–99ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಡಿಕೇರಿ ಇವರಿಗೆ ಪತ್ರ ಬರೆದು ವಾಹನದ ಮಾಲೀಕರ ಹೆಸರು ಮತ್ತು ವಿಳಾಸ ತಿಳಿಸಲು ಕೋರಲಾಗಿತ್ತು.

ಸದರಿ ಕಾರಣ ಕೇಳಿ ನೋಟಿಸಿಗೆ ವಾಹನದ ಮಾಲೀಕರ ಪರ ವಕೀಲರು ದಿ:26–5–99ರಂದು ವಕಾಲತ್ ಅರ್ಜಿ ಸಲ್ಲಿಸಿ ವಾಹನದ ಮಾಲೀಕನು ಮುಗ್ಧನಾಗಿದ್ದು, ಸದರಿ ತಪ್ಪು ನಡೆದಿರುವುದು ಅವನ ಗಮನಕ್ಕೆ ಬಾರದೆ ಚಾಲಕನು ಮಾಡಿದ ತಪ್ಪಾಗಿರುತ್ತದೆ. ಸದರಿ ಲಾರಿಯ ಬಾಡಿಗೆಗಳಿಂದ ಮಾಲೀಕನು ಜೀವನ ನಡೆಸಿ ಸಂಸಾರ ಸಾಗಿಸಬೇಕಾಗಿರುತ್ತದೆ. ವಾಹನವನ್ನು ನಿಲ್ಲಿಸಿದಲ್ಲಿ ಪ್ರಕರಣ ಮುಗಿಯುವವರೆಗೆ ಅದರ ಮೌಲ್ಯವನ್ನು ಕಳೆದುಕೊಳ್ಳುತದೆ ಮತ್ತು ವಾಹನದ ಮಾಲೀಕರಿಗೆ ತುಂಬಾ ನಷ್ಟವುಂಟಾಗುತ್ತದೆ. ಆದುದರಿಂದ ನ್ಯಾಯಾಲಯ ವಿಧಿಸುವ ಭದ್ರತೆಯನ್ನು ಒದಗಿಸುವುದಾಗಿ ತಿಳಿಸುತ್ತಾ ವಾಹನವನ್ನು ತಾತ್ಕಾಲಿಕ ವಶಕ್ಕೆ ನೀಡಬೇಕೆಂದು ಪ್ರಾರ್ಥಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಕೊಡಗಿನ ಹವಾಮಾನ ಗುಣಲಕ್ಷಣಗಳನ್ನು ಗಣನೆಗೆ ತೆಗೆದುಕೊಂಡು ಮತ್ತು ಸರ್ಕಾರ ಆದಾಯದ ದೃಷ್ಟಿಯಿಂದ ವಾಹನಕ್ಕೆ ಪ್ರಾಧಿಕೃತ ನ್ಯಾಯಾಲಯದಲ್ಲಿ 2,30,000/–(ಎರಡು ಲಕ್ಷದ ಮೂವತ್ತು ಸಾವಿರ) ಬೆಲೆ ನಿಗಧಿಪಡಿಸಿದ್ದು, ಸದರಿಯವರು ಒಪ್ಪಿಕೊಂಡು ರೂ.30,000/–(ಮೂವತ್ತು ಸಾವಿರ)ಗಳಿಗೆ ಬ್ಯಾಂಕ್ ಗ್ಯಾರೆಂಟಿ ಮತ್ತು ರೂ.2,00,000/–(ಎರಡು ಲಕ್ಷ)ಗಳಿಗೆ ಸಮನಾಗಿ ಇಬ್ಬರು ಶ್ಯೂರಿಟಿದಾರರನ್ನೊಳಗೊಂಡ ಇಂಡೆಮಿನಿಟಿ ಬಾಂಡ್ ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ ದಿ:14–6–1999ರಂದು ಷರತ್ತುಬದ್ಧವಾದ ಆದೇಶವನ್ನು ನೀಡಿ ಸೂಕ್ತ ಸ್ವೀಕೃತಿಯನ್ನು ಪಡೆದುಕೊಂಡು ವಾಹನವನ್ನು ಮಾಲೀಕರ ವಶಕ್ಕೆ ಮಧ್ಯಂತರಿಕವಾಗಿ ಬಿಡುಗಡೆ ಮಾಡಲಾಗಿರುತ್ತದೆ.

ತದನಂತರ ಜಪ್ತುಪಡಿಸಿಕೊಂಡ ಮದ್ಯದಿಂದ ತೆಗೆದ ಮಾದರಿಗಳನ್ನು ರಾಸಾಯನಿಕ ತಜ್ಞರು, ಬೆಂಗಳೂರು ಇವರಲ್ಲಿ ಪರೀಕ್ಷೆಗೆ ಒಳಪಡಿಸಲಾಗಿ ಅವರ ವರದಿ ದಿ:21–7–1999ರ ಪತ್ರ ಸಂ:ಸಿಸಿಎಲ್:3524/99ರಲ್ಲಿನ ಒಪ್ಪಿಗೆಯಂತೆ ಸದರಿ ಮದ್ಯವು 28.2° ಯು.ಪಿ.ಯಿಂದ 29.7° ಯು.ಪಿ.ಪ್ರತಿಯೊಂದು ಬಾಟಲಿಗಳು ಮದ್ಯದ ಸಾಮರ್ಥ್ಯ ಇರುವುದಾಗಿ ಮತ್ತು ಮಾನವನ ಸೇವನೆಗೆ ಯೋಗ್ಯವಾಗಿರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಈ ಆಧಾರದ ಮೇಲೆ ಸದರಿ ಮದ್ಯವನ್ನು ದಿ.23–7–99 ರಂದು ಅಬಕಾರಿ ನಿರೀಕ್ಷಕರು ಮಡಿಕೇರಿ ವಲಯ ರವರು ಪ್ರಸ್ತಾವನೆಯನ್ನು ಸಲ್ಲಿಸಿ ರಸಾಯನಿಕ ತಜ್ಞರ ವರದಿಯನ್ನು ಲಗತ್ತಿಸಿ ಅವರ ಅಭಿಪ್ರಾಯದ ಪ್ರಕಾರ ಮದ್ಯವು ಮಾನವ ಸೇವನೆಗೆ ಯೋಗ್ಯವಿರುವುದರಿಂದ ಸದರಿ 118ಪೆಟ್ಟಿಗೆ (1019.520 ಲೀಟರ್)ವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶ ನೀಡಬೇಕೆಂದು ಕೋರಿರುತ್ತಾರೆ. ದಿ.28–7–

99ರಂದು ರಾಸಾಯನಿಕ ಮಾದರಿಯನ್ನು ಹೊರತುಪಡಿಸಿ ಉಳಿದ 1014.840 ಲೀಟರ್ ಸ್ವದೇಶಿ ಮದ್ಯವನ್ನು 43(ಎ)(2)ರ ಪ್ರಕಾರ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ.

ತದನಂತರ ವಿಚಾರಣೆಯನ್ನು ಪ್ರಾರಂಭಿಸಿ ಪ್ರಕರಣ ದಾಖಲಿಸಿದ ಅಧಿಕಾರಿಗಳಾದ ಶ್ರೀ ಆರ್.ಜೆ.ಜ್ವಾಲಣ್ಣ, ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾದಳ, ಮಂಗಳೂರು ಇವರ ವಿಚಾರಣೆಯೂ ದಿ:2–2–02ರಂದು ನಡೆದಿರುತ್ತದೆ.

**ಮುಖ್ಯ ವಿಚಾರಣೆ ಎ.ಡಿ.ಪಿ.ಯವರಿಂದ :–**

ಆರ್.ಜೆ.ಜ್ವಾಲಣ್ಣ, ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾದಳ, ಮಂಗಳೂರು ಆದ ನಾನು ದಿ:21–7–95 ರಿಂದ ಮಂಗಳೂರು ವಿಭಾಗದ ಅಬಕಾರಿ ಗುಪ್ತ ವಾರ್ತಾದಳದ ಅಬಕಾರಿ ನಿರೀಕ್ಷಕನಾಗಿ ಕೆಲಸ ನಿರ್ವಹಿಸುತ್ತಿದ್ದೇನೆ. ದಿ:28–4–99ರಂದು ಮಡಿಕೇರಿ ಕುಶಾಲನಗರ ರಸ್ತೆಯ ಮಡಿಕೇರಿ ಪಟ್ಟಣದಲ್ಲಿ ಬರುವ ಸೋಮವಾರಪೇಟೆಗೆ ಹೋಗುವ ರಸ್ತೆ ತಿರುವಿನಲ್ಲಿ ಸಿಬ್ಬಂದಿಯೊಂದಿಗೆ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ರಾತ್ರಿ 8.00ಗಂಟೆ ಸಮಯದಲ್ಲಿ ಕುಶಾಲನಗರ ಕಡೆಯಿಂದ ಬಂದ ವಾಹನ(ಮಿನಿ ಲಾರಿ ಸಂ:ಕೆಎ–12–3301)ರನ್ನು ನಿಲ್ಲಿಸುವಂತೆ ಸೂಚನೆ ನೀಡಲಾಗಿ ವಾಹನದ ಚಾಲಕನು ವಾಹನವನ್ನು ನಿಲ್ಲಿಸಿದನು. ವಾಹನದಲ್ಲಿರುವ ಸರಕಿನ ಬಗ್ಗೆ ಚಾಲಕನನ್ನು ವಿಚಾರಿಸಲಾಗಿ ವಾಹನದಲ್ಲಿ ಇನ್ನಾವುದೇ ಸರಕು ಇಲ್ಲವೆಂಬುದಾಗಿ ತಿಳಿಸಿದನು. ವಾಹನವು ಕಂಬಿ ಮತ್ತು ಟಾರ್ಪಾಲಿನಿಂದ ಮುಚ್ಚಿಟ್ಟಿರುವುದರಿಂದ ಅನುಮಾನಗೊಂಡು ವಾಹನದ ಸರಕು ತುಂಬುವ ಜಾಗದಲ್ಲಿ ಪರಿಶೀಲಿಸಲಾಗಿ ವಾಹನದ ಹೊರಗಡೆಯ ಉದ್ದಕ್ಕೂ ವಾಹನದ ಸರಕು ತುಂಬುವ ಜಾಗಕ್ಕೂ ವ್ಯತ್ಯಾಸ ಕಂಡುಬಂದುದರಿಂದ ವಾಹನದ ಒಳಭಾಗದಲ್ಲಿ ತಪಾಸಣೆ ಮಾಡಲಾಗಿ ಒಂದು ವಿಶೇಷ ಕಂಪಾರ್ಟ್‌ಮೆಂಟ್ ರಚಿಸಿರುವುದು ಕಂಡುಬಂದಿತು. ಚಾಲಕನನ್ನು ಕರೆಸಿ ಕಂಪಾರ್ಟ್‌ಮೆಂಟನ್ನು ತೆರೆಯಿಸಿ ನೋಡಲಾಗಿ ಕಂಪಾರ್ಟ್‌ಮೆಂಟ್ ಒಳಗಡೆ ಮದ್ಯದ ಸೀಸೆಗಳು ಇರುವ ರಟ್ಟಿನ ಪೆಟ್ಟಿಗೆಗಳು ಕಂಡುಬಂದಿರುತ್ತದೆ. ಈ ಮದ್ಯದ ರಟ್ಟಿನ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಲು ದಾಖಲಾತಿ ಪತ್ರಗಳನ್ನು ಹಾಜರುಪಡಿಸುವಂತೆ ಚಾಲಕನನ್ನು ಕೇಳಲಾಗಿ ಆತನು ಯಾವುದೇ ವಿಧವಾದ ದಾಖಲಾತಿ ಪತ್ರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಯಾವುದೇ ದಾಖಲಾತಿಗಳಿಲ್ಲದೆ ಈ ರೀತಿಯ ಮದ್ಯಗಳನ್ನು ಹೊಂದಿ ಸಾಗಾಣಿಕೆ ಮಾಡುವುದು ಅಬಕಾರಿ ಕಾಯ್ದೆಯಂತೆ ಕಾನೂನು ಬಾಹಿರವಾಗಿರುತ್ತದೆ ಎಂಬ ವಿಚಾರವನ್ನು ಸದರಿ ಚಾಲಕನಿಗೆ ತಿಳಿಸಿ ಮುಂದಿನ ಕ್ರಮಕೈಗೊಳ್ಳಲು ಘನ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಸಮಯಾವಕಾಶವಿಲ್ಲದುದರಿಂದ ಸರ್ಚ್ ಮೆಮೋ ತಯಾರಿಸಿ ಇಲಾಖಾ ಸಿಬ್ಬಂದಿಯವರನ್ನೇ ಪಂಚರನ್ನಾಗಿಸಿಕೊಂಡು ಕಂಪಾರ್ಟ್‌ಮೆಂಟ್ ಒಳಗಡೆ ಇದ್ದ ಮದ್ಯದ ಪೆಟ್ಟಿಗೆಗಳನ್ನು ಲೆಕ್ಕ ಹಾಕಲಾಗಿ ಒಟ್ಟು 118 ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡುಬಂದಿತು. ಇದರಲ್ಲಿ 2 ಬಗೆಯ ಮದ್ಯದ ರಟ್ಟಿನ ಪೆಟ್ಟಿಗೆಗಳು ಇದ್ದು, ಪ್ರತಿಯೊಂದು ವಿಧದಿಂದಲೂ 180ಮಿಲಿಯ 13 ಸೀಸೆಯಂತೆ ಒಟ್ಟು 26 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೋಸ್ಕರ ತೆಗೆದುಕೊಂಡು ಅಬಕಾರಿ ಮೊಹರಿನಿಂದ ಸೀಲು ಮಾಡಲಾಯಿತು. ಮೊಹರಿನ ಮಾದರಿಯನ್ನು ತಯಾರಿಸಲಾಯಿತು. ಸದರಿ ಚಾಲಕನ ಹೆಸರು ಮತ್ತು ವಿಳಾಸ ಕೇಳಲಾಗಿ ತನ್ನ ಹೆಸರು ಪರಮೇಶ, ಕುಂಬೂರು ಗ್ರಾಮ, ಸೋಮವಾರಪೇಟೆ ತಾಲ್ಲೂಕು ಎಂಬುದಾಗಿ ತಿಳಿಸಿದನು. ಈ ಬಗ್ಗೆ ಸ್ಥಳದಲ್ಲಿಯೇ ಪಂಚರನಾಮ ತಯಾರಿಸಲಾಯಿತು. ಪಂಚರ ಸಹಿಯುಳ್ಳ ಚೀಟಿಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದುಕೊಂಡು ಸೀಸೆಗಳ ಮೇಲೆ ಅಂಟಿಸಲಾಯಿತು. ಮುಂದಿನ ಕ್ರಮಕೈಗೊಳ್ಳಲು ವಾಹನದ ಚಾಲಕನನ್ನು ದಸ್ತಗಿರಿ ಮಾಡಿ ಲಾರಿ ಸಮೇತ ದೊರೆತ ಸ್ವೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಳ್ಳಲಾಯಿತು. ಈ ಬಗ್ಗೆ ಮೊಕದ್ದಮೆಯನ್ನು ದಾಖಲಿಸಿಕೊಳ್ಳಲಾಯಿತು. ಮುಂದಿನ ಕ್ರಮಕೈಗೊಳ್ಳಲು ಮೊಕದ್ದಮೆಗೆ ಸಂಬಂಧಿಸಿದ ದಾಖಲಾತಿಗಳನ್ನು ಹಾಗೂ ಜಪ್ತುಮಾಡಿಕೊಂಡಿದ್ದ ವಸ್ತುಗಳನ್ನು ದಿ:29–4–99ರಂದು ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ರವರಿಗೆ ಹಸ್ತಾಂತರಿಸಲಾಯಿತು.

ಅಮಾನತು ಪಡಿಸಿಕೊಂಡಿರುವ ವಾಹನ ಮತ್ತು ಇತರೆ ವಸ್ತುಗಳನ್ನು ಅಂದರೆ ವಾಹನಕ್ಕೆ ಸಂಬಂಧಪಟ್ಟ ಜಾಕ್, ಚಕ್ರ ಮತ್ತು ವೀಲ್ಸ್, ಸ್ಪಾನರ್‌ಗಳನ್ನು ನೋಡಿದರೆ ಗುರುತಿಸುತ್ತೇನೆ. ಮೂಲ ಮಹಜರನ್ನು ಆರೋಪಿಯ ವಿರುದ್ಧ ಸಲ್ಲಿಸಲಾಗಿರುವ ಕ್ರಿಮಿನಲ್ ಮೊಕದ್ದಮೆಯನ್ನು ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ. ಅದರ ಜೆರಾಕ್ಸ್ ಪ್ರತಿಯನ್ನು ನಾನು ನೋಡುತ್ತಿದ್ದೇನೆ. (ಈ ಹಂತದಲ್ಲಿ ಅರ್ಜಿದಾರರ ವಕೀಲರು ಗುರುತಿಸಲು ಆಗುವುದಿಲ್ಲವೆಂದು ತಕರಾರು ಮಾಡುತ್ತಿದ್ದಾರೆ). ಮೂಲ ಮೊಹರಿನ ಮಾದರಿ ಪತ್ರವನ್ನು ವಲಯ ನಿರೀಕ್ಷಕರಿಗೆ ಒಪ್ಪಿಸಲಾಗಿದೆ.

**ಪಾಟಿ ಸವಾಲು:** ಶ್ರೀ ಕೆ.ಜಿ.ಬೋಪಯ್ಯ ರವರಿಂದ(ವಕೀಲರು) ನಾನು ಮಡಿಕೇರಿಗೆ ಅಂದರೆ ಲಾರಿಯನ್ನು ಅಮಾನತು ಪಡಿಸಿದ ಸ್ಥಳಕ್ಕೆ ಸಂಜೆ 7.00ಗಂಟೆಗೆ ತಲುಪಿದೆ. ಈ ಲಾರಿಗೆ ಮೊದಲು ಅನುಮಾನ ಬಂದ ಇತರೆ 5–6 ವಾಹನವನ್ನು ತಪಾಸಿಸಿದ್ದೇನೆ. ವಿವರ ಜ್ಞಾಪಕವಿಲ್ಲ. ನಮ್ಮೊಂದಿಗೆ ನಮ್ಮ ಇಲಾಖಾ ಸಿಬ್ಬಂದಿ 3 ಜನ ಇದ್ದರು. ಲಾರಿಯಲ್ಲಿ ವಾಹನ ಚಾಲಕ ಒಬ್ಬನೇ ಇದ್ದ. 118 ಪೆಟ್ಟಿಗೆಗಳಿಂದ ಮಾದರಿ ತೆಗೆದಿಲ್ಲ. ಒಂದೊಂದು ಪೆಟ್ಟಿಗೆಯಲ್ಲಿ 180ಮಿಲಿಯ 48 ಬಾಟಲಿಗಳಿದ್ದವು. ಕೆಲವು ಪೆಟ್ಟಿಗೆಗಳಲ್ಲಿ ಮಾತ್ರ ಅದರಲ್ಲಿದ್ದ ಸೀಸೆಗಳನ್ನು ಎಣಿಸಲಾಯಿತು. ಎಲ್ಲ ಪೆಟ್ಟಿಗೆಗಳನ್ನು ಎಣಿಸಲಿಲ್ಲ. ಮೊಕದ್ದಮೆ ಬರೆಯುವಾಗ 3 ರಿಂದ 4 ಪ್ರತಿಯನ್ನು ಮಾಡುತ್ತೇನೆ. ಆ ಪ್ರತಿಗಳನ್ನು ನಮ್ಮ ಮೇಲಾಧಿಕಾರಿಗಳಿಗೆ ಕಳುಹಿಸುತ್ತೇವೆ. ಎಲ್ಲಿ ಮೊಕದ್ದಮೆ ದಾಖಲಿಸುತ್ತೇವೆಯೋ ಅಲ್ಲಿ ಸಂಬಂಧಪಟ್ಟ ಮೇಲಾಧಿಕಾರಿಗಳಿಗೆ ಪ್ರತಿಯನ್ನು ಕಳುಹಿಸುತ್ತೇವೆ. ಲಾರಿಯಲ್ಲಿ ಅಮಾನತು ಪಡಿಸಿರುವ ಮದ್ಯದ ಪೆಟ್ಟಿಗೆಗಳನ್ನು ಹೊರತು ಬೇರೆ ಏನೂ ಇರಲಿಲ್ಲ. ಮದ್ಯದ ಪೆಟ್ಟಿಗೆಗಳನ್ನು ಬಚ್ಚಿಟ್ಟಿದ ಲಾರಿಯ ಕಂಪಾರ್ಟ್‌ಮೊಂಟಿನ ಛಾಯಚಿತ್ರ ತೆಗೆದಿಲ್ಲ. ಲಾರಿಯಲ್ಲಿ ಈ ರೀತಿ ಪ್ರತ್ಯೇಕ ಕಂಪಾರ್ಟ್‌ಮೆಂಟ್ ಇರಲಿಲ್ಲ ಎನ್ನುವುದು ಸರಿಯಲ್ಲ. ತಪಾಸಣೆ ಮಾಡಿದ ಸ್ಥಳ ರಾಜ್ಯ ಹೆದ್ದಾರಿ, ಈ ಹೆದ್ದಾರಿಯಲ್ಲಿ ಸಾಕಷ್ಟು ವಾಹನಗಳು ಓಡಾಡುತ್ತಿರುತ್ತವೆ. ಅಮಾನತು ಪಡಿಸಿ ಮಹಜರು ಪಡೆಯಲು ಸುಮಾರು ಒಂದೂವರೆ ಗಂಟೆ ಸಮಯ ಹಿಡಿದಿದೆ. ಈ ಸಮಯದಲ್ಲಿ ಸಾಕಷ್ಟು ವಾಹನಗಳು ಓಡಾಡಿರುತ್ತವೆ. ಸರ್ಚ್ ಮೆಮೋ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದೆ. ಮೂಲ ಸರ್ಚ್ ಮೆಮೋವನ್ನು

ನ್ಯಾಯಾಲಯಕ್ಕೆ ಹಾಜರುಪಡಿಸಿದೆ. ಎಲ್ಲಾ ಪ್ರತಿಗಳನ್ನು ಒಟ್ಟಿಗೆ ಮೇಲಾಧಿಕಾರಿಗಳಿಗೆ ಕಳಿಸಿಕೊಡುತ್ತೇವೆ. ಲಾರಿ ಚಾಲಕನ ಹೇಳಿಕೆ ಪಡೆದಿಲ್ಲ. ಲಾರಿಯ ಮಾಲೀಕನ ವಿವರ ಪಡೆಯಲಿಲ್ಲ. ಲಾರಿಯ ಮಾಲೀಕನ ಮೇಲೂ ಸಹ ನ್ಯಾಯಾಲಯಕ್ಕೆ ಆರೋಪಿಯನ್ನಾಗಿ ಮಾಡಿ ಮೊಕದ್ದಮೆ ಸಲ್ಲಿಸಲಾಗಿದೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಅಂತಿಮ ವರದಿಯನ್ನು ಸಲ್ಲಿಸಲಾಗಿದೆಯೇ ಇಲ್ಲವೋ ಗೊತ್ತಿಲ್ಲ. ನಾನು ನ್ಯಾಯಾಲಯದಲ್ಲಿ ಈ ವರೆಗೆ ಯಾವುದೇ ಸಾಕ್ಷಿ ನುಡಿದಿರುವುದಿಲ್ಲ. ಲಾರಿಗೆ ಪ್ರತ್ಯೇಕ ಗುರುತು ಮಾಡಿಲ್ಲ. ಆದರೆ ಇಂಜಿನ್ ಮತ್ತು ಚಾಸಿ ನಂಬರ್ ಮಹಜರಿನಲ್ಲಿ ನಮೂದಿಸಿದೆ. ನಾನು ಆ ದಿನ ಲಾರಿ ತಪಾಸಣೆ ಮಾಡಿದ ಬಗ್ಗೆ ಡೈರಿ ಬರೆದಿರುತ್ತೇನೆ. ನಾನು ಆದಿನ ಲಾರಿಯನ್ನು ತಪಾಸಣೆ ಮಾಡಿ ಮದ್ಯದ ಪೆಟ್ಟಿಗೆಗಳನ್ನು ಅಮಾನತುಪಡಿಸಿಕೊಂಡಿಲ್ಲ ಎನ್ನುವುದು ಸರಿಯಲ್ಲ. ಲಾರಿಯಲ್ಲಿ ಮದ್ಯದ ಪೆಟ್ಟಿಗೆಗಳಿದ್ದ ಬಗ್ಗೆ ಲಾರಿಯ ಮಾಲೀಕರಿಗೆ ಯಾವುದೇ ತಿಳುವಳಿಕೆ ಇಲ್ಲಾ ಎಂದರೆ ನನಗೆ ಗೊತ್ತಿಲ್ಲ. ಅಮಾನತು ಪಡಿಸಿದ್ದನ್ನು ಬಿಟ್ಟರೆ ಮಾಲೀಕರಿಂದ ಯಾವುದೇ ವಿವರ ಪಡೆದಿಲ್ಲ. ಲಾರಿಯ ಮಾಲೀಕರ ಮೇಲೆ ಸುಳ್ಳು ಮೊಕದ್ದಮೆ ಅಂದರೆ ನಮ್ಮಲ್ಲಿದ್ದ ವಾರಸುದಾರರಿಲ್ಲದ ಮದ್ಯದ ಪೆಟ್ಟಿಗೆಗಳನ್ನು ವಿಲೇವಾರಿ ಮಾಡಲು ಈ ರೀತಿ ಸುಳ್ಳು ಮೊಕದ್ದಮೆ ಮಾಡಿದ್ದೇನೆಂದರೆ ಸರಿಯಲ್ಲ. ಈ ಪ್ರಕರಣವನ್ನು ಲಾರಿ ಮಾಲೀಕನಿಗೂ ಯಾವುದೇ ಸಂಬಂಧ ಇಲ್ಲವೆಂದರೆ ಸರಿಯಲ್ಲ. ಸ್ಥಳದಲ್ಲಿ ಯಾವುದೇ ಮಹಜರ್ ಸ್ಯಾಂಪಲ್ ಸೀಜರ್, ಸರ್ಚ್ ಮೆಮೋ ಇತ್ಯಾದಿಗಳನ್ನು ಸ್ಥಳದಲ್ಲಿ ತಯಾರಿಸಿಲ್ಲದೆ ಇರುವುದರಿಂದ ಈ ಇಲಾಖೆಗೆ ಕಳಿಸಿಲ್ಲವೆಂಬುದು ಸರಿಯಲ್ಲ. ಈ ಹಂತದಲ್ಲಿ ಸಾಕ್ಷಿಯು ಸ್ವತಃ ಹೇಳುವುದೇನೆಂದರೆ ತಾವು ಅಮಾನತುಪಡಿಸಿಕೊಂಡಿರುವ ದಾಖಲೆಗಳು ಮತ್ತು ಮಾಲುಗಳನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿ ಆ ಬಗ್ಗೆ ಸ್ವೀಕೃತಿ ಪಡೆದಿದ್ದೇನೆ. ದಿ:29–4–99ರಂದು ಅವುಗಳನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿದ್ದೇನೆ. ಸಮಯ ಹೇಳಲು ಬರುವುದಿಲ್ಲ. ಈ ಪ್ರಾಧಿಕಾರಕ್ಕೆ ಯಾವುದೇ ದಾಖಲಾತಿಗಳನ್ನು ಒಪ್ಪಿಸಿರುವುದಿಲ್ಲ ಮತ್ತು ಸುಳ್ಳು ನುಡಿಯುತ್ತಿದ್ದೇನೆ ಎಂದು ಸೂಚಿಸಿರುವುದು ಸರಿಯಲ್ಲ. ನಮ್ಮ ಇಲಾಖೆಯಲ್ಲಿ ವರ್ಷಕ್ಕೆ ಇಷ್ಟು ಮೊಕದ್ದಮೆ ದಾಖಲಿಸಬೇಕೆಂಬ ಸುತ್ತೋಲೆ ಇದೆ. ಅಂಕಿ ಅಂಶಗಳ ಉದ್ದೇಶಕ್ಕಾಗಿ ಈ ಮೊಕದ್ದಮೆ ದಾಖಲಿಸಿದ್ದೇನೆಂದರೆ ಸುಳ್ಳು.

ತದನಂತರ ಪ್ರಕರಣದ ಇನ್ನೊಬ್ಬ ಮಹಜರು ಸಾಕ್ಷಿದಾರರಾದ ಶ್ರೀ ಬಾಲಕೃಷ್ಣ ಬಿನ್ ನಾರಾಯಣ ರಾವ್, ಅಬಕಾರಿ ರಕ್ಷಕ, ಗುಪ್ತವಾರ್ತಾ ದಳ, ಬಿಜೈ, ಮಂಗಳೂರು ಇವರ ವಿಚಾರಣೆಯು ದಿ:2–2–02ರಂದು ನಡೆದಿರುತ್ತದೆ.

**ಮುಖ್ಯ ವಿಚಾರಣೆ ಎ.ಡಿ.ಪಿ.ಯವರಿಂದ :–**

ಬಾಲಕೃಷ್ಣ ಬಿನ್ ನಾರಾಯಣ ರಾವ್, ಅಬಕಾರಿ ರಕ್ಷಕ, ಗುಪ್ತವಾರ್ತಾ ದಳ, ಬಿಜೈ, ಮಂಗಳೂರು ಆದ ನಾನು ದಿ: 28–4–99 ರಂದು ರಾತ್ರಿ 8 ಘಂಟೆ ಸಮಯದಲ್ಲಿ ಕುಶಾಲನಗರ ಮಡಿಕೇರಿ ರಸ್ತೆಯ ಸೋಮವಾರಪೇಟೆಗೆ ಹೋಗುವ ದಾರಿಯ ಜಂಕ್ಷನ್‌ನಲ್ಲಿ ಅಬಕಾರಿ ನಿರೀಕ್ಷಕರು ಮತ್ತು ನಾವು ರಸ್ತೆ ಕಾವಲು ನಡೆಸುತ್ತಿದ್ದಾಗ ಕುಶಾಲನಗರ ಕಡೆಯಿಂದ ಬಂದ ಕೆಎ–12–3301 ನಂಬರಿನ ಲಾರಿಯನ್ನು ತಡೆದು ನಿಲ್ಲಿಸಿ ತಪಾಸಣೆ ಮಾಡಿದಾಗ ಚಾಲಕನಲ್ಲಿ ಕೇಳಿದಾಗ ಏನು ಇಲ್ಲವೆಂದು ತಿಳಿಸಿದನು. ನಾವುಗಳು ಕೂಲಂಕುಷವಾಗಿ ಪರಿಶೀಲಿಸಲಾಗಿ ಡ್ರೈವರ್ ಸೀಟಿನ ಒತ್ತಾಗಿ ಒಂದು ಪ್ರತ್ಯೇಕ ಕಂಪಾರ್ಟ್‌ಮೆಂಟ್ ಇರುವುದು ಕಂಡು ಬಂತು. ಚಾಲಕನನ್ನು ಕರೆದು ಸದರಿ ಕಂಪಾರ್ಟ್‌ಮೆಂಟನ್ನು ತೆರೆಯಲು ಹೇಳಿದಾಗ ಆತನು ತೆರೆದನು. ಅದರಲ್ಲಿ 118 ಮದ್ಯದ ಪೆಟ್ಟಿಗೆಗಳು ಕಂಡು ಬಂತು. ಅವುಗಳ ಪೈಕಿ 59 ಪೆಟ್ಟಿಗೆಗಳು ಡಿ.ಡಿ ರಮ್(ದಾಸಪ್ಪ ಮತ್ತು ಸನ್ಸ್)ರವರಿಂದ ತಯಾರಿಸಲ್ಪಟ್ಟ ಪ್ರತಿಯೊಂದು ಪೆಟ್ಟಿಗೆಗಳಲ್ಲಿ 48 ಸೀಸೆ ಬ್ರಾಂಡಿಗಳಿದ್ದವು. ಉಳಿದ 59 ಪೆಟ್ಟಿಗೆಗಳಲ್ಲಿ ಒಂದೊಂದರಲ್ಲೂ 48 ಸೀಸೆ ಬ್ರಾಂಡಿಗಳಿದ್ದವು. ಪ್ರತಿಯೊಂದು ಸೀಸೆಯಲ್ಲಿ 180 ಮಿಲಿಯ ಪ್ರಮಾಣದಾಗಿತ್ತು.

ಸದರಿ ಮದ್ಯದ ಸೀಸೆಗಳನ್ನು ಸಾಗಾಟ ಮಾಡಲು ಚಾಲಕನಲ್ಲಿ ಪರವಾನಗಿ ಬಗ್ಗೆ ವಿಚಾರಿಸಿದಾಗ ಯಾವುದು ಇಲ್ಲವೆಂದು ತಿಳಿಸಿದನು. ಅಲ್ಲಿ ಬೇರೆ ಸಾಕ್ಷಿಗಳಿಗಾಗಿ ಹುಡುಕಿದೆವು ಯಾರು ಸಿಗಲಿಲ್ಲ. ಸಾಕ್ಷಿಗಳನ್ನು ಹುಡುಕಲು ನಾನು ಹೋಗಿದ್ದೆ. ಆಗ ನಮ್ಮೊಡನೆ ಇದ್ದ ಇಲಾಖೆಯ ರಕ್ಷಕರನ್ನೆ ಪಂಚ ಸಾಕ್ಷಿಯಾಗಿ ಪಡೆದು ಆರೋಪಿಯ ಹೆಸರು ವಿಳಾಸವನ್ನು ತೆಗೆದುಕೊಂಡು 26 ಸೀಸೆಗಳನ್ನು ಅಂದರೆ 13 ಬ್ರಾಂಡಿ ಪೆಟ್ಟಿಗೆಗಳಿಂದ ಮತ್ತು 13 ರಮ್ ಪೆಟ್ಟಿಗೆಗಳಿಂದ ತೆಗೆದಿದ್ದು, ವಾಹನದ ಚಾಲಕನ ಹೆಸರು ಪಡೆಯಲಾಯಿತು. ಅವನ ಹೆಸರು ಪರಮೇಶ ತಂದೆ ರಾಜಣ್ಣ, ಕುಂಬೂರು ನಿವಾಸಿ, ಮಾದಾಪುರ ಗ್ರಾಮವೆಂದು ತಿಳಿಸಿದನು. ಒಟ್ಟು 26 ಸೀಸೆಗಳನ್ನು ಇಲಾಖೆಯ ಮೊಹರಿನಿಂದ ಗುರುತು ಚೀಟಿ ಅಂಟಿಸಲಾಯಿತು. ಲಾರಿಯ ಟಾಪ್ ಲೈಟಿನ ಬೆಳಕಿನಿಂದ ಬರೆದಿದ್ದು ಸ್ಥಳದಲ್ಲಿ ಬರೆದ ಮಹಜರಿಗೆ ನಾನು ಸಹಿ ಹಾಕಿರುತ್ತೇನೆ ಹಾಗೂ ಇತರೆಯವರು ಸಹಿ ಮಾಡಿರುತ್ತಾರೆ. ಆಗಿನ ಮಹಜರಿನ ನಕಲನ್ನು ಈಗ ನೋಡುತ್ತಿದ್ದೇನೆ. ಇದರಲ್ಲಿ ನನ್ನ ಸಹಿ ಇರುತ್ತದೆ.(ನಕಲನ್ನು) (ಗುರುತಿಸಲು ವಕೀಲರು ಆಕ್ಷೇಪಣೆ ಮಾಡಿರುತ್ತಾರೆ.) ಲಾರಿ ಮತ್ತು ಲಾರಿಗೆ ಸಂಬಂಧಪಟ್ಟ ವಸ್ತುಗಳನ್ನು ಈಗ ನೋಡಿದರೆ ಗುರುತಿಸುತ್ತೇನೆ.

**ಪಾಟಿ ಸವಾಲು.ಕೆ.ಜಿ.ಬಿ. ವಕೀಲರಿಂದ**

ನಾನು ಆ ಸ್ಥಳಕ್ಕೆ 7 ಘಂಟೆಗೆ ಬಂದೆ. ಈ ಲಾರಿಯನ್ನು ತನಿಖೆಯ ಸಮಯದಲ್ಲಿ ಕೆಲವು ಲಾರಿಯನ್ನು ತನಿಖೆ ಮಾಡಿರುತ್ತೇವೆ. ಎಷ್ಟು ಎಂದು ಹೇಳಲು ಬರುವುದಿಲ್ಲ. ಯಾವ ಯಾವ ತರದ ವಾಹನವನ್ನು ತಪಾಸಣೆ ಮಾಡಿದೆನೆಂದು ಹೇಳಲು ಬರುವುದಿಲ್ಲ. ಸ್ಥಳದಲ್ಲಿನ ಟೈರ್ ಶಾಪ್‌ನ ಬಗ್ಗೆ ನೆನಪಿಲ್ಲ. ರಸ್ತೆಯ ಪಕ್ಕದಲ್ಲಿ ಇರುವ ಮರಗಳ ನೆನಪಿಲ್ಲ. ಯಾವ ಯಾವ ಮರಗಳಿವೆಂದು ಗೊತ್ತಿಲ್ಲ. 3 ರಸ್ತೆ ಬಂದು ಸೇರುವ ಜಾಗವಾಗಿರುತ್ತದೆ. ಸೋಮವಾರಪೇಟೆ ರಸ್ತೆಯ ಉದ್ದಕ್ಕೂ ಮನೆಗಳು ಇರಬಹುದು. ರಾತ್ರಿಯಾದರಿಂದ ನಾನು ಗಮನಿಸಿಲ್ಲ. ಮಹಜರಿನಲ್ಲಿ ಮರಗಳ ಬಗ್ಗೆ (ಎಡಬಲ) ಬರೆದಿರುವುದು ಗೊತ್ತಿಲ್ಲ. ಸೀಜು ಮಾಡಿದ ಮಹಜರನ್ನು ಓದಿ ಸಹಿ ಮಾಡಲಾಯಿತು. ಮಹಜರಿನಲ್ಲಿ ಚೆಕ್‌ಬಂದಿ ಬರೆದಿಲ್ಲ. ಲಾರಿಯಲ್ಲಿದ್ದ ಕಂಪಾರ್ಟ್‌ಮೆಂಟಿಗೆ ಬೀಗ ಹಾಕಿರಲಿಲ್ಲ. ಬೋಲ್ಟ್ ಹಾಕಿತ್ತು ಎನ್ನುವ ವಿಷಯವನ್ನು ಮಹಜರಿನಲ್ಲಿ ಬರೆದಿದೆ. ಮಹಜರನ್ನು ಬರೆಯುವಾಗ 1 ಘಂಟೆ ಸಮಯವಾಯಿತು. ಈ ಮಧ್ಯೆ ರಸ್ತೆಯಲ್ಲಿ ವಾಹನ ಹೋಗಿದ್ದು ನೆನಪಿಲ್ಲ. ಮಹಜರಿನಲ್ಲಿ ಇಲಾಖೆಯ ಅಬಕಾರಿ ರಕ್ಷಕ ವಿಠಲ ಎಂಬುಬರು

ಬರೆದಿರುತ್ತಾರೆ. ಮಾದರಿಗೆ ತೆಗೆದ 13 ಪೆಟ್ಟಿಗೆ ಯಾವುದು ಎಂದು ಗೊತ್ತಿಲ್ಲ. ಒಂದು ಬಾಕ್ಸ್‌ನ್ನು ಲೆಕ್ಕ ಮಾಡಿ 48 x180ಮಿಲಿಯ ಇದೆಯೆಂದು ತಿಳಿದೆವು. ಸೀಸೆಯಲ್ಲಿ ಬ್ರಾಂಡಿ ರಮ್ ಎಂದು ಬರೆದಿದ್ದರಿಂದ ಯಾವ ಯಾವ ಮಾದರಿಯವು ಎಂದು ಗುರುತಿಸಿದೆವು. ರಮ್ ಎಲ್ಲಿಂದ ಬಂತು ಎಂದು ವಿಚಾರಣೆ ಮಾಡಿರುವುದಿಲ್ಲ. ಲಾರಿ ಮಾಲೀಕರ ಬಗ್ಗೆ ನನ್ನ ಸಮ್ಮುಖದಲ್ಲಿ ವಿಚಾರಣೆ ಮಾಡಿರುವುದಿಲ್ಲ. ಲಾರಿಯಲ್ಲಿ ಬೇರೆಯ ವಸ್ತುಗಳು ಇದ್ದವೋ ಇಲ್ಲವೊ ಎಂಬ ಬಗ್ಗೆ ನಾನು ನೋಡಿಲ್ಲ. ಅಧಿಕಾರಿಯೊಂದಿಗೆ ಆ ದಿವಸ ನಾವು ಇದ್ದು ಲಾರಿಯನ್ನು ತಪಾಸಣೆ ಮಾಡಿಲ್ಲವೆಂದರೆ ಸರಿಯಲ್ಲ. ಲಾರಿಯಲ್ಲಿ ಪ್ರತ್ಯೇಕ ಕಂಪಾರ್ಟ್‌ಮೆಂಟ್ ಇರಲಿಲ್ಲವೆನ್ನುವುದು ಸರಿಯಲ್ಲ. ಸೋಮವಾರಪೇಟೆ ಜಂಕ್ಷನ್ ಮನೆಗಳಿವೆ ಎಂದು ಹೇಳಿದರೆ ಸರಿಯಲ್ಲ.

ಲಾರಿಯು ಆ ದಿವಸ ಸ್ಥಳದಲ್ಲಿ ಇರಲಿಲ್ಲವೆಂದರೆ ಸರಿಯಲ್ಲ ಮತ್ತು ಲಾರಿಯಲ್ಲಿ ನೀವು ಹೇಳಿದ ರೀತಿಯ ಮದ್ಯ ಇರಲಿಲ್ಲವೆಂದರೆ ಸರಿಯಲ್ಲ. ನಾನು ನಮ್ಮ ಅಧಿಕಾರಿಗಳ ಅಂದರೆ ನಮ್ಮ ಜೊತೆಗಿದ್ದ ತನಿಖಾಧಿಕಾರಿಯವರ ಮಾತು ಕೇಳಿ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ. ನಾನು ಸಾಕ್ಷಿ ಹುಡುಕಲು ಪ್ರಯತ್ನ ಮಾಡಿಲ್ಲವೆಂದರೆ ಸರಿಯಲ್ಲ. ಸದರಿ ಸ್ಥಳ ಮಡಿಕೇರಿ ಪುರಸಭೆಯ ವ್ಯಾಪ್ತಿಯಲ್ಲಿದೆ ಎಂದರೆ ನನಗೆ ಗೊತ್ತಿಲ್ಲ.

ನಂತರದ ದಿನಗಳಲ್ಲಿ ವಾಹನದ ಮಾಲೀಕರು ಬ್ಯಾಂಕ್ ಗ್ಯಾರೆಂಟಿಯ ಅವಧಿಯನ್ನು ಮುಂದುವರೆಸುತ್ತಾ ಬಂದಿರುತ್ತಾರೆ. ದಿ:15-11-2000, 29-11-2000, 14-2-2001, 14-3-2001, 22-12-2001, 2-2-02, 16-2-02 12-8-04, 25-1-07, 22-2-07ರಂದು ವಾಹನದ ಮಾಲೀಕರು ಹಾಜರಿದ್ದು ವಾಹನ ಹಾಜರುಪಡಿಸಿಲ್ಲ. ದಿ: 20-4-02, 11-1-07ರಂದು ವಾಹನ ಮತ್ತು ಮಾಲೀಕರು ಹಾಗೂ ವಕೀಲರು ಹಾಜರಿರುವುದಿಲ್ಲ. ದಿ:25-1-07, 12-9-11ರಂದು ವಾಹನದ ಮಾಲೀಕರು ಹಾಜರಿದ್ದು ವಾಹನವನ್ನು ಹಾಜರುಪಡಿಸಿರುವುದಿಲ್ಲ. ದಿ:28-11-11ರಂದು ವಾಹನದ ಮಾಲೀಕರು ಹಾಜರಿದ್ದು ಅವರ ಪರ ವಕೀಲರು ಹಾಜರಿರುವುದಿಲ್ಲ. ದಿ:16-12-11ರಂದು ವಾಹನದ ಮಾಲೀಕರು ಅವರ ಪರ ವಕೀಲರು ಹಾಜರಿರುವುದಿಲ್ಲ. ದಿ:26-12-11ರಂದು ಮಾಲೀಕರು ಹಾಜರಿದ್ದು ವಾಹನ ಹಾಜರುಪಡಿಸಿರುವುದಿಲ್ಲ. ಅವರ ಪರ ವಕೀಲರು ಕೂಡ ಹಾಜರಿರುವುದಿಲ್ಲ. ಈ ರೀತಿ ಪ್ರಕರಣ ವಿಲೇಗೊಳಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಆಸಕ್ತಿ ತೋರಿಸದೇ ವಿಳಂಭನೀತಿ ಅನುಸರಿಸುತ್ತಿದ್ದಾರೆ ಎಂಬುವುದು ಕಂಡುಬಂದಿರುತ್ತದೆ.

ಮೇಲಿನ ಹಲವು ದಿನಾಂಕಗಳಲ್ಲಿ ವಾಹನ ಮಾಲೀಕರು ವಾಹನದೊಂದಿಗೆ ಹಾಜರಿರುತ್ತಾರೆ. ಇನ್ನು ಕೆಲವು ದಿನಗಳಲ್ಲಿ ಹಾಜರಿದ್ದು ವಾಹನವನ್ನು ಹಾಜರುಪಡಿಸದೆ ವಕೀಲರನ್ನು ನೇಮಿಸದೆ ಕಾಲವಿಳಂಭ ಮಾಡುತ್ತಿರುವುದಲ್ಲದೆ ವಿಚಾರಣೆ ದಿನಾಂಕದಲ್ಲಿ ವಕೀಲರು ಹಾಜರಿಲ್ಲದ ಕಾರಣ ವಿಚಾರಣೆಯನ್ನು ಮುಂದುವರೆಸಲು ಅಸಾಧ್ಯವಾಗಿರುತ್ತದೆ. ಮತ್ತು ಸದರಿಯವರು ಬ್ಯಾಂಕ್ ಗ್ಯಾರೆಂಟಿಯನ್ನು ವಿಸ್ತರಿಸದೆ ಇದ್ದು ವಿಳಂಭ ಮಾಡುತಿದ್ದುದರಿಂದ ಬ್ಯಾಂಕ್ ಗ್ಯಾರೆಂಟಿಯನ್ನು ಇನ್‌ವೋಕ್ ಮಾಡಿ ದಿ:13-7-10ರಂದು ಆರ್.ಡಿ.ಖಾತೆಯಲ್ಲಿಡಲಾಗಿರುತ್ತದೆ.

ಮೇಲಿನ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ವಾಹನವನ್ನು ಖುದ್ದಾಗಿ ಹಾಜರುಪಡಿಸಬೇಕೆಂದು ಸಾಕಷ್ಟು ಅವಕಾಶವನ್ನು ನೀಡಿ ಸೂಚಿಸಿದ್ದರೂ ಕೂಡ ವಿಫಲರಾಗಿದ್ದು ದಿ: 14-6-99 ರ ಮಧ್ಯಂತರ ಆದೇಶದ ಷರತ್ತುಗಳನ್ನು ಪಾಲಿಸದೇ ಉಲ್ಲಂಘನೆ ಮಾಡಿರುವುದು ಕಂಡುಬಂದಿದ್ದು ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುವುದರಿಂದ ವಾಹನ ಮಿನಿ ಲಾರಿ ಸಂ:ಕೆಎ-12-3301ರನ್ನು ಮಾಲೀಕರು ನ್ಯಾಯಾಲಯಕ್ಕೆ ಹಾಜರುಪಡಿಸದೇ ಈ ನ್ಯಾಯಾಲಯದ ಆದೇಶಗಳಲ್ಲಿನ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ಆರ್.ಡಿ.ಖಾತೆಯಲ್ಲಿರುವ ರೂ.30,000/-(ಮೂವತ್ತು ಸಾವಿರ)ಗಳನ್ನು ಮತ್ತು ರೂ.2,00,000/-(ಎರಡು ಲಕ್ಷ)ಗಳಿಗೆ ಸಮನಾಗಿ ಇಬ್ಬರು ಶ್ಯೂರಿಟಿದಾರರನ್ನೊಳಗೊಂಡು ಭದ್ರತೆಯಾಗಿ ನೀಡಿರುವ ಇಂಡೆಮಿನಿಟಿ ಬಾಂಡ್ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್‌ಇ:3:ಸಿಆರ್‌ಎಂ:4:99-2000, ದಿ:6-1-2012.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾ ದಳ ರವರ ಪ್ರ.ವ.ವ.ಸಂ:27/98-99, ದಿ:28-4-99ರಲ್ಲಿ ವಶಪಡಿಸಿಕೊಂಡ ವಾಹನ ಮಿನಿ ಲಾರಿ ಸಂ:ಕೆಎ-12-3301ರನ್ನು ಮಾಲೀಕರು ನ್ಯಾಯಾಲಯಕ್ಕೆ ಹಾಜರುಪಡಿಸದೇ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ಆರ್.ಡಿ.ಖಾತೆಯಲ್ಲಿರುವ ರೂ.30,000/-(ಮೂವತ್ತು ಸಾವಿರ)ಗಳನ್ನು ಮತ್ತು ರೂ.2,00,000/-(ಎರಡು ಲಕ್ಷ)ಗಳಿಗೆ ಸಮನಾಗಿ ಇಬ್ಬರು ಶ್ಯೂರಿಟಿದಾರರನ್ನೊಳಗೊಂಡ ಇಂಡೆಮಿನಿಟಿ ಬಾಂಡ್‌ಗಳನ್ನು ಮುಟ್ಟುಗೊಲು ಹಾಕಿಕೊಂಡು ಆದೇಶ ನೀಡಿದೆ.

ಈ ಆದೇಶವನ್ನು ದಿ:6-1-12ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು .

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,**
**ಕೊಡಗು ಜಿಲ್ಲೆ, ಮಡಿಕೇರಿ**

**ಪಿ.ಆರ್. 135**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:3:ಸಿಆರ್‌ಎಂ:84:1997–1998, ದಿ:6–1–2012**

ಉಪಸ್ಥಿತರು : **ಹೆಚ್.ಎನ್.ಆನಂದ್**, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ದ** | **ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ವಿರಾಜಪೇಟೆ ಗ್ರಾಮಾಂತರ ಠಾಣೆ. | | ಪತ್ತೆಯಾಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು:–**

ದಿ:16–7–97ರಂದು ಆರಕ್ಷಕ ಸಿಬ್ಬಂದಿಗಳು ಕರ್ತವ್ಯದಲ್ಲಿದ್ದ ಸಮಯದಲ್ಲಿ ಮಾಕುಟ್ಟ ಉಪ ಠಾಣೆಯ ಕಾಬೀಲ ಸಂಖ್ಯೆ 29 ರವರು ಬೆಳಗಿನ ಜಾವದ ಸಮಯದಲ್ಲಿ ಕರ್ನಾಟಕ ಕೇರಳಾ ಗಡಿಪ್ರದೇಶವಾದ ಮಾಕುಟ್ಟ ಉಪ ಠಾಣೆಯ ಹತ್ತಿರ ಹಾದು ಹೋಗುವ ರಸ್ತೆಯಲ್ಲಿ ಜೀಪ್ ಸಂ:ಕೆಎಲ್–14–ಎ–7375ರಲ್ಲಿದ್ದ ವ್ಯಕ್ತಿಗಳು ಪೊಲೀಸ್ ರವರನ್ನು ನೋಡಿ ಜೀಪನ್ನು ನಿಲ್ಲಿಸಿ ಓಡಿಹೋಗಿದ್ದು, ಜೀಪನ್ನು ಪರಿಶೀಲಿಸಲಾಗಿ ಅದರ ಹಿಂಭಾಗದಲ್ಲಿ 10ಚೀಲದಲ್ಲಿ ಸಾರಾಯಿ ಪ್ಯಾಕೇಟು ಇರುವುದು ಕಂಡುಬಂದಿದ್ದು, ಇದು ಯಾವುದೇ ರಹದಾರಿ ಇಲ್ಲದ ಸಾರಾಯಿ ಪ್ಯಾಕೇಟುಗಳೆಂದು ತಿಳಿದಿದ್ದು, ಸದರಿ ಜೀಪನ್ನು ಮತ್ತು ಅದರಲ್ಲಿದ್ದ 10ಚೀಲ ಸಾರಾಯಿ ಪ್ಯಾಕೇಟುಗಳನ್ನು ಮುಂದಿನ ಕ್ರಮಕ್ಕಾಗಿ ಠಾಣೆಗೆ ತಂದು ಇವುಗಳನ್ನು ಪರಿಶೀಲಿಸಲು ಪಂಚರನ್ನು ಬರಮಾಡಿಕೊಂಡು ಕೇಸಿನ ವಿವರ ತಿಳಿಸಿ ಅಜಮಾಯಿಸಿಕೆ ಮಾಡಲಾಗಿ ಜೀಪ್ ಮಾಸಲು ತಿಳಿ ಬೂದು ಬಣ್ಣದ್ದಾಗಿದ್ದು, ಟಾರ್ಪಾಲಿನಿಂದ ಮೇಲೆ ಹೊದಿಕೆಯಾಗಿರುತ್ತದೆ. ಇದಕ್ಕೆ ಮೇಲುಗಡೆ ಕ್ಯಾರಿಯರ್ ಇರುತ್ತದೆ. ಇದರ ಮುಂದೆ ಮತ್ತು ಹಿಂದೆ ಕೆಎಲ್–14–ಎ–7375ರ ಎಂದು ಇಂಗ್ಲಿಷಿನಲ್ಲಿ ಬರೆದಿರುತ್ತದೆ. ಜೀಪಿನ ಮುಂಭಾಗದ ಬಲಭಾಗದ ಡಿಸ್ಕನ್ನು ಪರಿಶೀಲಿಸಲಾಗಿ ಡಿಸ್ಕನ ಮೇಲೆ 9609 WIWH 4.50EX16-ALP 897 A ಎಡಭಾಗದ ಡಿಸ್ಕನಲ್ಲಿ ಸಹ 9609 WIWH 4.50EX16-ALP 897 A ಮುಂಭಾಗದ ಬಲ ಟಯರ್‌ನಲ್ಲಿ ಮೇಡ್ ಇನ್ ಇಂಡಿಯಾ BKT No:LX-02-T-2-H-BK-018-0, ಮುಂಭಾಗದ ಎಡಭಾಗದ ಟಯರ್‌ನಲ್ಲಿ ನಂ:BKT-LX-02-T-2-H-BK-018-0 Sept ಎಂದು ಬರೆದಿರುತ್ತದೆ. ಹಿಂದಿನ ಭಾಗವನ್ನು ಪರಿಶೀಲಿಸಲಾಗಿ ಡಿಸ್ಕನ ಮೇಲೆ 9609 WIWH 4.50EX16-ALP 897 A ಎಂದು ಬರೆದಿರುತ್ತದೆ. ಹಿಂಭಾಗದ ಎಡಭಾಗದ ಡಿಸ್ಕನ್ನು ಪರಿಶೀಲಿಸಲಾಗಿ ಅದರಲ್ಲಿಯೂ ಸಹ ಡಿಸ್ಕ್ ನಂ:9609 WIWH 4.50EX16-ALP 897 A ಎಂದು ಬರೆದಿರುತ್ತದೆ. ಹಿಂಭಾಗದ ಬಲಭಾಗದ ಚಕ್ರವನ್ನು ಪರಿಶೀಲಿಸಲಾಗಿ ಟಯರ್‌ನ ಮೇಲೆ ಎಂಆರ್‌ಎಫ್ X 18125 NOV 95 ಎಂಬುದಾಗಿ ಬರೆದಿರುತ್ತದೆ. ಹಾಗೂ ಹಿಂಭಾಗದ ಎಡಭಾಗದ ಟಯರ್‌ನ ಮೇಲೆ ಜೆಕೆ ಟಯರ್ BO 6501Aug 94 ಎಂಬುದಾಗಿ ಬರೆದಿರುತ್ತದೆ. ಜೀಪಿನ ಬೋನಟ್‌ನ್ನು ತೆಗೆದು ಇಂಜಿನನ್ನು ನೋಡಲಾಗಿ ಇಂಜಿನಿನ ಮೇಲೆ ನಂ:DU57823 ಎಂಬುದಾಗಿ ಇರುತ್ತದೆ. ರೇಡಿಯೇಟರ್‌ನ ಮೇಲೆ BPIL 082511 ಎಂಬುದಾಗಿ ಇರುತ್ತದೆ. ಡೈನಮ್‌ನ ಮೇಲೆ SA 1543 A 12 (V) No;2692107213 -1996 ಎಂದು ಬರೆದಿರುತ್ತದೆ. FUEL:INJUCTION PUMP ಮೇಲೆ 116254 ಎಂದು ಬರೆದಿರುತ್ತದೆ. Fitterನ್ನು ನೋಡಲಾಗಿ ಅದರ ಮೇಲೆ MICO 9450030117 ಎಂಬುದಾಗಿ ಬರೆದಿರುತ್ತದೆ. ಇದರ ಚಾಸಿ ನಂ:5DODI-4-KU-DU 57823 ಎಂಬುದಾಗಿ ಇರುತ್ತದೆ. ಈ ಜೀಪು ಓಡುವ ಸ್ಥಿತಿಯಲ್ಲಿದ್ದು ಮಹೇಂದ್ರ ಜೀಪು ಆಗಿರುತ್ತದೆ. ಜೀಪಿನ ಒಳಗಿದ್ದ ಸಾರಾಯಿ ಪ್ಯಾಕೇಟುಗಳ ಚೀಲವನ್ನು ಪರಿಶೀಲಿಸಲಾಗಿ ಒಂದೊಂದು ಚೀಲದಲ್ಲಿ 285 ಪ್ಯಾಕೇಟುಗಳಿದ್ದು, ಅವು 100ಮಿಲಿಯದ್ದಾಗಿರುತ್ತದೆ. ಪ್ಯಾಕೇಟಿನ ಮೇಲೆ ಕೆಂಪು ಅಕ್ಷರದಲ್ಲಿ ಮೈಸೂರ್ ಷುಗರ್ ಕಂಪೆನಿ ಲಿಮಿಟೆಡ್, ಕೊಡಗು ಜಿಲ್ಲೆ. ಮದ್ಯಪಾನ ಆರೋಗ್ಯಕ್ಕೆ ಹಾನಿಕರ ಎಂದು ಪ್ರಿಂಟ್ ಮಾಡಿರುತ್ತದೆ. ಒಂದೊಂದು ಚೀಲದಲ್ಲಿ ಒಂದೊಂದು ಪ್ಯಾಕೇಟುಗಳನ್ನು ತೆಗೆದು ಬಿಳಿಯ ಬಟ್ಟೆಯಿಂದ ಪ್ಯಾಕ್ ಮಾಡಿ ಹೊಲಿದು ಸೀಲು ಮಾಡಿ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು ಮತ್ತು ಚೀಲಗಳ ಬಾಯಿಯನ್ನು ಹೊಲಿದು ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು. 10 ಚೀಲಗಳಲ್ಲಿ ಒಟ್ಟು 2850 ಸಾರಾಯಿ ಪ್ಯಾಕೇಟುಗಳು ಇರುತ್ತವೆ. ಇವುಗಳ ಒಟ್ಟು ಬೆಲೆ ಸುಮಾರು ರೂ.22,800/– ಆಗಿರುತ್ತದೆ ಎಂದು ಪಂಚರಾದ ನಾವುಗಳು ಅಭಿಪ್ರಾಯ ಪಡುತ್ತೇವೆ ಮತ್ತು ಈ ಜೀಪಿನ ಮೌಲ್ಯ ಸುಮಾರು ರೂ.3,20,000/– ಆಗುತ್ತದೆ. ಯಾರೋ ಆರೋಪಿಗಳು ಮೇಲ್ಕಂಡ ಜೀಪನ್ನು ಉಪಯೋಗಿಸಿ ಇಷ್ಟು ಮೌಲ್ಯದ ಸಾರಾಯಿ ಪ್ಯಾಕೇಟನ್ನು ಕರ್ನಾಟಕ ರಾಜ್ಯದಿಂದ ಕೇರಳ ರಾಜ್ಯಕ್ಕೆ ಯಾವುದೇ ಸರ್ಕಾರದ ರಹದಾರಿ ಇಲ್ಲದೇ ಅಕ್ರಮವಾಗಿ ಸಾಗಿಸುತ್ತಿರುವುದು ಕಂಡುಬಂದಿರುತ್ತದೆ. ಅದೂ ಅಲ್ಲದೆ ಜೀಪ್ ಕೇರಳಾ ರಾಜ್ಯದ ನೋಂದಣಿ ಸಂಖ್ಯೆಯನ್ನು ಹೊಂದಿದ್ದು, ಆರೋಪಿಗಳು ಪೊಲೀಸ್‌ರವರನ್ನು ಕಂಡು ಸಾರಾಯಿ ಮತ್ತು ಜೀಪನ್ನು ಬಿಟ್ಟು ಓಡಿಹೋಗಿರುವುದಾಗಿ ತಿಳಿದು ಬಂದ ಪ್ರಯುಕ್ತ ಸಾರಾಯಿ ಮತ್ತು ಜೀಪನ್ನು ವಶಕ್ಕೆ ತೆಗೆದುಕೊಂಡು ಅಬಕಾರಿ ಕಾಯ್ದೆ ಕಲಂ 34, 36, 39, 43ರಂತೆ ಮೊಕದ್ದಮೆ ಸಂಖ್ಯೆ 131/97, ದಿ:16–7–97ರಂತೆ ಪ್ರಕರಣ ದಾಖಲಿಸಿಕೊಂಡು ಮುಂದಿನ ಕ್ರಮದ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿ:19–7–97ರಂದು ವಾಹನದ ಮಾಲೀಕರೆಂದು ಶ್ರೀ ಸಾಜು ಬಿನ್ ಚೆರಿಯನ್, ಮಾವಲಿಲ್ ಹೌಸ್, ಅರಲಾಂ ಅಂಸಂ ದೇಸಂ, ತಲಶೆರಿ ತಾಲ್ಲೂಕು, ಕಣ್ಣೂರು ಜಿಲ್ಲೆ, ಇವರು ಅವರ ಪರ ವಕೀಲರಿಂದ ಅರ್ಜಿ ಮತ್ತು ವಕಾಲತನ್ನು ಸಲ್ಲಿಸಿರುತ್ತಾರೆ. ಸದರಿ ಅರ್ಜಿಯ ಆಧಾರದ ಮೇಲೆ ನಿಯಮ 43ಬಿರನ್ವಯ ವಾಹನದ ಮಾಲೀಕರಿಗೆ ದಿ:24–7–97 ರಂದು ಕಾರಣ ಕೇಳಿ ನೋಟಿಸ್ ನೀಡಲಾಗಿರುತ್ತದೆ. ದಿ:26–8–97ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತಲಶೆರಿ, ಕೇರಳ ರಾಜ್ಯ ಇವರಿಗೆ ಪತ್ರ ಬರೆದು 'ಬಿ' ಎಕ್ಸ್‌ಟ್ರಾಕ್ಟ್ ಕೋರಲಾಗಿರುತ್ತದೆ.

ದಿ:19–7–97ರಂದು ವಾಹನದ ಮಾಲೀಕರಾದ ಶ್ರೀ ಸಾಜು ಬಿನ್ ಚೆರಿಯನ್, ಮಾವಲಿಲ್ ಹೌಸ್, ಅರಲಾಂ ಅಂಸಂ ದೇಸಂ, ತಲಶೇರಿ ತಾಲ್ಲೂಕು, ಕಣ್ಣೂರು ಜಿಲ್ಲೆ, ಇವರು ಸಲ್ಲಿಸಿರುವ ಅರ್ಜಿಯಲ್ಲಿನ ಅಂಶದಂತೆ ತಮ್ಮ ಜೀಪಿನಲ್ಲಿ ಯಾವುದೇ ಅಪರಾಧವನ್ನು ಮಾಡಿಲ್ಲ ಮೇಲ್ಕಂಡ ಅಪರಾಧಕ್ಕೂ ವಾಹನದ ಮಾಲೀಕರಿಗೂ ಯಾವುದೇ ಸಂಬಂಧವಿರುವುದಿಲ್ಲ, ಯಾವುದೇ ಕಾನೂನು ಬಾಹಿರ ವಸ್ತುಗಳ ಸಾಗಾಣಿಕೆಗೆ ಪ್ರತ್ಯಕ್ಷವಾಗಲೀ ಪರೋಕ್ಷವಾಗಿಯಾಗಲೀ ಬಳಸಿರುವುದಿಲ್ಲ. ಇದು ಯಾವುದೋ ದುರುದ್ದೇಶದಿಂದ ಕೆಲವು ದುಷ್ಟಶಕ್ತಿಗಳ ಚಿತಾವಣೆಯಿಂದ ಪೋಲೀಸ್‌ನವರು ತಮ್ಮ ಜೀಪನ್ನು ವಶಪಡಿಸಿಕೊಂಡಿರುವುದಾಗಿದೆ. ಈ ಪ್ರಕರಣದಿಂದಾಗಿ ಮಾಲೀಕರು ದೈಹಿಕವಾಗಿಯೂ ಮಾನಸಿಕವಾಗಿಯೂ ಸಂಪೂರ್ಣ ಜರ್ಜರಿತರಾಗಿರುವುದರಿಂದ ಹಾಗೂ ಯಾವುದೇ ರೀತಿಯಲ್ಲೂ ವಾಹನದ ಮಾಲೀಕರು ಈ ಪ್ರಕರಣದಲ್ಲಿ ಶಾಮೀಲಾಗದೇ ಇರುವುದರಿಂದ ಸದರಿ ವಾಹನದ ಮೇಲೆ ಯಾವುದೇ ಕ್ರಮ ಮುಂದುವರೆಸದೇ ಸದರಿ ವಾಹನವನ್ನು ಮಧ್ಯಂತರಿಕವಾಗಲೀ ಅಂತಿಮವಾಗಿಯಾಗಲೀ ವಾಹನದ ಮಾಲೀಕರ ಸ್ವಾಧೀನಕ್ಕೆ ಬಿಟ್ಟುಕೊಡುವಂತೆ ಕೋರಿಕೊಂಡಿರುತ್ತಾರೆ.

ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ತಮ್ಮ ಜೀಪನ್ನು ತಾತ್ಕಾಲಿಕವಾಗಿ ಸುಪರ್ದಿಗೆ ಬಿಟ್ಟುಕೊಡುವಂತೆ ಸಲ್ಲಿಸಿದ ಅರ್ಜಿಯ ಬಗ್ಗೆ ವಾದವಿವಾದಗಳನ್ನು ಕೇಳಲಾಯಿತು.ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಸಲ್ಲಿಸಿದ ಅರ್ಜಿಯ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿದಾಗ ಅವರ ಹೇಳಿಕೆಯು ಮೇಲ್ನೋಟಕ್ಕೆ ಸುಳ್ಳು ಎಂದು ಕಂಡುಬರುತ್ತದೆ. ವಾಹನದ ಮಾಲೀಕರು ಸದರಿ ಜೀಪನ್ನು ಬಹಳ ಹಿಂದಿನಿಂದಲೂ ಸಾರಾಯಿ ಪ್ಯಾಕೇಟುಗಳ ಅಕ್ರಮ ಸಾಗಾಣಿಕೆಯಲ್ಲಿ ಬಳಸುತ್ತಿದ್ದು, ಆಕಸ್ಮಿಕವಾಗಿ ಆ ದಿನ ಪೋಲೀಸಿನವರ ಕೈಗೆ ಸಿಕ್ಕಿ ಬಿದ್ದಿರುವ ಸಾಧ್ಯತೆ ಕಂಡುಬಂದಿರುತ್ತದೆ. ಅಲ್ಲದೆ ವಾಹನ ಮಾಲೀಕರು ದಿ:16–7–97ರಂದು ಮಾಕುಟ್ಟದಲ್ಲಿ ತಮ್ಮ ಜೀಪನ್ನು ತಾನೇ ಸ್ವತಃ ಓಡಿಸುತ್ತಿದ್ದು ಪೋಲೀಸಿನವರನ್ನು ಕಂಡು ತಾನು ಈ ಅಪರಾಧದಲ್ಲಿ ಸಿಕ್ಕಿಹಾಕಿಕೊಳ್ಳಬಾರದೆಂಬ ಕಾರಣಕ್ಕೆ ಹಾಗೂ ಒಂದು ವೇಳೆ ಸ್ಥಳದಲ್ಲಿ ತಾನಿದ್ದರೆ ತನ್ನನ್ನೂ ಸಹಾ ಬಂಧಿಸುವುದು ಖಚಿತವೆಂದು ತಿಳಿದು ಈ ಪ್ರಕರಣದಿಂದ ತಾನು ನುಣುಚಿಕೊಳ್ಳುವ ಸಲುವಾಗಿ ಈ ಜೀಪನ್ನು ಸ್ಥಳದಲ್ಲಿ ಬಿಟ್ಟು ಓಡಿಹೋಗಿರುವುದು ಸಂಶಯಕ್ಕೆ ಎಡೆ ಮಾಡುತ್ತದೆ.

ಅಲ್ಲದೇ ಒಂದು ವೇಳೆ ಮಾಲೀಕರ ಕೋರಿಕೆಯಂತೆ ಜೀಪ್ ಸಂ:ಕೆಎಲ್–14–ಎ–7375ರನ್ನು ಅವರ ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಟ್ಟಿದ್ದೇ ಆದಲ್ಲಿ ಅವರು ಮತ್ತೆ ಸದರಿ ಜೀಪನ್ನು ಇಂತಹುದೇ ಕೃತ್ಯದಲ್ಲಿ ಅಥವಾ ಇನ್ನಾವುದೇ ರೀತಿಯ ಅಕ್ರಮ ಚಟುವಟಿಕೆಗಳಿಗೆ ಬಳಸುವ ಸಾಧ್ಯತೆ ಇದೆ. ಅಥವಾ ಈ ಜೀಪಿನ ಮೇಲೆ ಈ ಪ್ರಾಧಿಕಾರದಲ್ಲಿ ದಾಖಲಾಗಿರುವ ಮೊಕದ್ದಮೆಯು ಅಂತಿಮ ತೀರ್ಮಾನವಾಗುವ ಮೊದಲೇ ಸದರಿ ಜೀಪನ್ನು ಬೇರೆಯವರ ಹೆಸರಿಗೆ ಪರಭಾರೆ ಮಾಡುವುದಕ್ಕಾಗಲೀ ಮಾರಾಟ ಮಾಡುವುದಕ್ಕಾಗಲೀ ಗಿರವಿ ಮಾಡುವುದಕ್ಕಾಗಲೀ ಜೀಪಿನ ಭಾಗಗಳ ನಂಬರ್ ಬದಲಾವಣೆ ಮಾಡಿ ಇನ್ನ್ಯಾವುದೇ ರೀತಿಯಲ್ಲಿ ಸರ್ಕಾರಕ್ಕೆ ವಂಚನೆ ಮಾಡುವ ಸಾಧ್ಯತೆ ಇರುತ್ತದೆ. ಅಲ್ಲದೆ ಜೀಪಿನ ಮಾಲೀಕರು ಮೂಲತಃ ಕೇರಳಾ ರಾಜ್ಯದವರಾಗಿದ್ದು, ಅಲ್ಲದೇ ಅವರಿಗೆ ಜೀಪನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಲು ಸೂಚನೆ ನೀಡಿದರೂ ಸಹ ಹಾಜರುಪಡಿಸದೇ ಅಥವಾ ಇನ್ನ್ಯಾವುದೇ ರೀತಿಯಲ್ಲಿ ಉಲ್ಲಂಘನೆ ಮಾಡುವ ಸಾಧ್ಯತೆಗಳಿರುತ್ತದೆ.

ಆದುದರಿಂದ ಮಾಲೀಕರ ಕೋರಿಕೆಯಂತೆ ವಾಹನ ಜೀಪ್ ಸಂ:ಕೆಎಲ್–14–ಎ–7375ರನ್ನು ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡುವುದು ಸೂಕ್ತವಲ್ಲವೆಂದು ತೀರ್ಮಾನಿಸಿ ದಿ:19–8–97ರಂದು ವಾಹನದ ಮಾಲೀಕರ ಕೋರಿಕೆ ಅರ್ಜಿಯನ್ನು ತಿರಸ್ಕರಿಸಿ ಆದೇಶ ನೀಡಲಾಗಿರುತ್ತದೆ. ಸದರಿ ಆದೇಶದ ವಿರುದ್ಧ ವಾಹನದ ಮಾಲೀಕರು ಮಡಿಕೇರಿ ಪ್ರಧಾನ ಸತ್ರ ನ್ಯಾಯಾಲಯ ಇಲ್ಲಿ ಕ್ರಿಮಿನಲ್ ಅಪೀಲು ಸಂ:45/97ರಂತೆ ಮೇಲ್ಮನವಿ ಸಲ್ಲಿಸಿದ್ದು, ಸದರಿ ಅಪೀಲನ್ನು ನ್ಯಾಯಾಲವು ದಿ:29–10–97ರಂದು ವಿಲೇಗೊಳಿಸಿ ವಾಹನವನ್ನು ಮಾಲೀಕರ ವಶಕ್ಕೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸುವ ಬಗ್ಗೆ ರೂ.15,000/–(ಹದಿನೈದು ಸಾವಿರ)ಗಳ ಕ್ಯಾಷ್ ಸೆಕ್ಯೂರಿಟಿ ಮತ್ತು ಇನ್ನುಳಿದ ಮೊತ್ತಕ್ಕೆ ವಾಹನದ ಮೌಲ್ಯಕ್ಕೆ ಸಂಬಂಧಪಟ್ಟಂತೆ ಭದ್ರತೆಯನ್ನು ಪಡೆದುಕೊಳ್ಳಲು ಆದೇಶ ನೀಡಿರುತ್ತದೆ. ನ್ಯಾಯಾಲಯದ ಆದೇಶದಂತೆ ವಾಹನದ ಮಾಲೀಕರು ರೂ.15,000/–(ಹದಿನೈದು ಸಾವಿರ)ಗಳ ಕ್ಯಾಷ್ ಸೆಕ್ಯೂರಿಟಿ ಮತ್ತು ರೂ.3,00,000/–(ಮೂರು ಲಕ್ಷ)ಗಳ ಬೆಲೆ ಬಾಳುವ ತಲಶೇರಿ ತಾಲ್ಲೂಕು ಅರಲಾಂ ಗ್ರಾಮದಲ್ಲಿರುವ ಆರ್.ಎಸ್.ನಂ:239/1ರಲ್ಲಿ ಶ್ರೀ ಮಾವಿಲಿಲ್ ಚೆರಿಯನ್ ಬಿನ್ ಚೆರಿಯನ್, ನಿವೃತ್ತ ಟೀಚರ್, ಇವರಿಗೆ ಸಂಬಂಧಪಟ್ಟ ಜಮೀನಿನ ಸಾಲ್ವೆನ್ಸಿ ಸರ್ಟಿಫಿಕೇಟನ್ನು ತಹಶೀಲ್ದಾರ್, ತಲಶೇರಿ ತಾಲ್ಲೂಕು ಇವರಿಂದ ದಿ:29–11–97 ರಂದು ಪಡೆದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ ಮತ್ತು ಇಂಡೆಮಿನಿಟಿ ಬಾಂಡ್, ಅಫಿಡವಿಟ್ ಮತ್ತು ಜಾಮೀನುದಾರರಾದ ಶ್ರೀ ಜಿಮ್ಮಿ ಚೆರಿಯನ್, ಅರಲಾಂ ಗ್ರಾಮ, ತಲಶೇರಿ ತಾಲ್ಲೂಕು ಇವರಿಗೆ ಸಂಬಂಧಪಟ್ಟ ರೂ.5,00,000/–(ಐದು ಲಕ್ಷ)ಗಳ ಬೆಲೆ ಬಾಳುವ 0.50ಸೆಂಟ್ಸ್ ಭೂಮಿ, ಸರ್ವೇ ನಂ:210/1ನ್ನು ಕೂಡ ಸಲ್ಲಿಸಿರುತ್ತಾರೆ. ಈ ಆಧಾರದ ಮೇಲೆ ಮಾನ್ಯ ಘನ ಸೆಷನ್ಸ್ ಜಡ್ಜ್ ನ್ಯಾಯಾಲಯದ ಆದೇಶದಂತೆ ದಿ:1–12–97 ರಂದು ವಾಹನವನ್ನು ಮಾಲೀಕರ ವಶಕ್ಕೆ ಸ್ವೀಕೃತಿ ಪಡೆದು ಮಧ್ಯಂತರ ಬಿಡುಗಡೆಗೊಳಿಸಲಾಗಿರುತ್ತದೆ.

ಸದರಿ ಕ್ಯಾಷ್ ಶ್ಯೂರಿಟಿ ಹಣ ರೂ.15,000/–(ಹದಿನೈದು ಸಾವಿರ)ಗಳನ್ನು ದಿ:1–12–97ರಂದು ಆರ್.ಡಿ. ಖಾತೆಗೆ ಹೊಂದಾಣಿಕೆ ಮಾಡಿಕೊಂಡು ಸದರಿ ದಿನಾಂಕದಂದು ಈ ಪ್ರಾಧಿಕಾರದ ಆದೇಶ ಸಂ:ಇಎಕ್ಸ್:3:ಸಿಆರ್‌ಎಂ:84:97–98, ದಿ:1–12–97ರಂತೆ ವಾಹನವನ್ನು ಶ್ರೀ ಸಾಜು ಬಿನ್ ಚೆರಿಯನ್, ಮಾವಲಿಲ್ ಹೌಸ್, ಅರಲಾಂ ಅಂಸಂ ದೇಸಂ, ತಲಶೇರಿ ತಾಲ್ಲೂಕು, ಕಣ್ಣೂರು ಜಿಲ್ಲೆ, ಇವರಿಗೆ ವಕೀಲರ ಸಮಕ್ಷಮ ಮಧ್ಯಂತರಿಕವಾಗಿ ಬಿಡುಗಡೆಗೊಳಿಸಲಾಗಿರುತ್ತದೆ. ಈ ಮೊಕದ್ದಮಯಲ್ಲಿ ವಶಪಡಿಸಿಕೊಂಡಿದ್ದ ಸಾರಾಯಿ ಪ್ಯಾಕೇಟುಗಳನ್ನು ಈ ಕಛೇರಿಯ ಆದೇಶ ಸಂ.ಇಎಕ್ಸ್‌ಇ:ಸಿಆರ್‌ಎಂ:84:97–98. ದಿ:4–9–97ರಂತೆ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿದೆ. ಅದರಂತೆ ಅಬಕಾರಿ ಸುಂಕ, ಮೂಲಬೆಲೆ ಹಾಗೂ ತೆರಿಗೆ ಒಟ್ಟು ರೂ.7,043/–(ಏಳು ಸಾವಿರದ ನಲವತ್ತ ಮೂರು)ಗಳನ್ನು ದಿ:15–7–97ರಂದು ಎಸ್.ಬಿ.ಐ. ವಿರಾಜಪೇಟೆ ನಲ್ಲಿ ಚಲನ್ ನಂ: 13 ರಂತೆ ಪಾವತಿಸಿಕೊಳ್ಳಲಾಗಿದೆ.

ತದನಂತರ ಪ್ರಕರಣದ ವಿಚಾರಣೆಗಾಗಿ ದಿ:3–1–01, 10–1–01, 24–1–01, 14–2–01, 7–3–01, 16–12–04, 18–1–07, 3–7–07, 23–1–10, 22–8–11, 12–9–11, 28–11–11, 26–12–11, 6–1–12 ದಿನಾಂಕಗಳಂದು ನಿಗಧಿಪಡಿಸಿದ್ದು, 14–2–01ವಕೀಲರು ಮತ್ತು ವಾಹನದ ಮಾಲೀಕರು ವಾಹನದೊಂದಿಗೆ ಹಾಜರಿರುತ್ತಾರೆ. 7–3–01, 18–1–07 (ವಕೀಲರು ಮಾತ್ರ ಹಾಜರಿರುತ್ತಾರೆ), 23–1–10ವಕೀಲರು ಮತ್ತು ವಾಹನದ

ಮಾಲೀಕರು ಹಾಜರಿರುತ್ತಾರೆ. 28–11–11(ವಕೀಲರು ಮಾತ್ರ ಹಾಜರಿರುತ್ತಾರೆ), 26–12–11ರಂದು ವಕೀಲರೊಂದಿಗೆ ವಾಹನದ ಮಾಲೀಕರು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ. ಮಧ್ಯಂತರಿಕವಾಗಿ ವಾಹನವನ್ನು ಪಡೆದ ನಂತರ ದಿ:4–2–01ರಂದು ಮಾತ್ರ ಈ ನ್ಯಾಯಾಲಯದ ಮುಂದೆ ವಾಹನವನ್ನು ಹಾಜರುಪಡಿಸಿರುತ್ತಾರೆ. ತದನಂತರ ಮೇಲಿನ ದಿನಾಂಕಗಳಲ್ಲಿ ಮಾಲೀಕರು ಹಾಜರಾಗದೇ ವಾಹನವನ್ನು ಹಾಜರುಪಡಿಸದೇ ಇದ್ದು, ಕೆಲವೊಂದು ದಿನಾಂಕಗಳಲ್ಲಿ ಮಾಲೀಕರ ಪರ ವಕೀಲರು ಹಾಜರಾಗಿ ಒಂದಿಲ್ಲೊಂದು ಕಾರಣವನ್ನು ತಿಳಿಸುತ್ತಾ ಪ್ರಕರಣಗಳನ್ನು ವಿಲೇಗೊಳಿಸಲು ಆಸಕ್ತಿ ತೋರಿಸದೇ ಅಸಹಕಾರ ನೀಡುತ್ತಿದ್ದಾರೆ.

ಮೇಲಿನ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ವಾಹನವನ್ನು ಖುದ್ದಾಗಿ ಹಾಜರುಪಡಿಸಬೇಕೆಂದು ಸಾಕಷ್ಟು ಅವಕಾಶವನ್ನು ನೀಡಿ ಸೂಚಿಸಿದ್ದರೂ ಕೂಡ ವಿಫಲರಾಗಿದ್ದು ಮಡಿಕೇರಿ ಘನ ನ್ಯಾಯಾಲಯದ ದಿ: 29–10–97 ರ ಮಧ್ಯಂತರ ಆದೇಶದ ಷರತ್ತುಗಳನ್ನು ಪಾಲಿಸದೇ ಉಲ್ಲಂಘನೆ ಮಾಡಿರುವುದು ಕಂಡುಬಂದಿದ್ದು ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುವುದರಿಂದ ವಾಹನ ಜೀಪ್ ಸಂ:ಕೆಎಲ್–14–ಎ–7375ರನ್ನು ಮಾಲೀಕರು ನ್ಯಾಯಾಲಯಕ್ಕೆ ಹಾಜರುಪಡಿಸದೇ ಮಾನ್ಯ ಮಡಿಕೇರಿ ಪ್ರಧಾನ ಸತ್ರ ನ್ಯಾಯಾಲಯದ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ಆರ್.ಡಿ.ಖಾತೆಯಲ್ಲಿರುವ ರೂ.15,000/–(ಹದಿನೈದು ಸಾವಿರ)ಗಳನ್ನು ಮತ್ತು ಇಬ್ಬರು ಜಾಮೀನುದಾರರಲ್ಲೊಬ್ಬರ ರೂ.3,00,000/–(ಮೂರು ಲಕ್ಷ)ಗಳಿಗೆ ಬೆಲೆ ಬಾಳುವ ತಲಶೆರಿ ತಾಲ್ಲೂಕು ಅರಲಾಂ ಗ್ರಾಮದಲ್ಲಿರುವ ಆರ್.ಎಸ್.ನಂ:239/1ರಲ್ಲಿ ಶ್ರೀ ಮಾವಿಲಿಲ್ ಚೆರಿಯನ್ ಬಿನ್ ಚೆರಿಯನ್, ನಿವೃತ್ತ ಟೀಚರ್, ಅರಲಾಂ ಗ್ರಾಮ ಇವರಿಗೆ ಸಂಬಂಧಪಟ್ಟ ಜಮೀನಿನ ಸಾಲ್ವೆನ್ಸಿ ಸರ್ಟಿಫಿಕೇಟನ್ನು ತಹಶೀಲ್ದಾರ್, ತಲಶೆರಿ ತಾಲ್ಲೂಕು ಇವರಿಂದ ದಿ:29–11–97 ರಂದು ಸಲ್ಲಿಸಿರುವ ಇಂಡೆಮಿನಿಟಿ ಬಾಂಡ್, ಅಫಿಡವಿಟ್ ಮತ್ತು ಮತ್ತೊಬ್ಬ ಜಾಮೀನುದಾರರಾದ ಶ್ರೀ ಜಿಮ್ಮಿ ಚೆರಿಯನ್, ಅರಲಾಂ ಗ್ರಾಮ, ತಲಶೆರಿ ತಾಲ್ಲೂಕು ಇವರಿಗೆ ಸಂಬಂಧಪಟ್ಟ ರೂ.5,00,000/–(ಐದು ಲಕ್ಷ) ಗಳ ಬೆಲೆ ಬಾಳುವ 0.50ಸೆಂಟ್ಸ್ ಭೂಮಿ, ಸರ್ವೇ ನಂ:210/1ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್ಇ:3:ಸಿಆರ್ಎಂ:84:99–98, ದಿ:6–1–2012.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಆರಕ್ಷಕ ಉಪ ನಿರೀಕ್ಷಕರು, ವಿರಾಜಪೇಟೆ ಗ್ರಾಮಾಂತರ ಠಾಣೆ ರವರ ಪ್ರ.ವ.ವ.ಸಂ:131/97, ದಿ:16–7–97ರಲ್ಲಿ ವಶಪಡಿಸಿಕೊಂಡ ವಾಹನ ಜೀಪ್ ಸಂ:ಕೆಎಲ್–14–ಎ–7375ರನ್ನು ಮಾಲೀಕರು ನ್ಯಾಯಾಲಯಕ್ಕೆ ಹಾಜರುಪಡಿಸದೇ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ಆರ್.ಡಿ.ಖಾತೆಯಲ್ಲಿರುವ ರೂ.15,000/–(ಹದಿನೈದು ಸಾವಿರ)ಗಳನ್ನು ಮತ್ತು ಇಬ್ಬರು ಜಾಮೀನುದಾರರಲ್ಲೊಬ್ಬರ ರೂ.3,00,000/–(ಮೂರು ಲಕ್ಷ)ಗಳಿಗೆ ಬೆಲೆ ಬಾಳುವ ತಲಶೆರಿ ತಾಲ್ಲೂಕು ಅರಲಾಂ ಗ್ರಾಮದಲ್ಲಿರುವ ಆರ್.ಎಸ್.ನಂ:239/1ರಲ್ಲಿ ಶ್ರೀ ಮಾವಿಲಿಲ್ ಚೆರಿಯನ್ ಬಿನ್ ಚೆರಿಯನ್, ನಿವೃತ್ತ ಟೀಚರ್, ಇವರಿಗೆ ಸಂಬಂಧಪಟ್ಟ ಜಮೀನಿನ ಸಾಲ್ವೆನ್ಸಿ ಸರ್ಟಿಫಿಕೇಟನ್ನು ತಹಶೀಲ್ದಾರ್, ತಲಶೆರಿ ತಾಲ್ಲೂಕು ಇವರಿಂದ ದಿ:29–11–97 ರಂದು ಸಲ್ಲಿಸಿರುವ ಇಂಡೆಮಿನಿಟಿ ಬಾಂಡ್, ಅಫಿಡವಿಟ್ ಮತ್ತು ಇನ್ನೊಬ್ಬ ಜಾಮೀನುದಾರರಾದ ಶ್ರೀ ಜಿಮ್ಮಿ ಚೆರಿಯನ್, ಅರಲಾಂ ಗ್ರಾಮ, ತಲಶೆರಿ ತಾಲ್ಲೂಕು ಇವರಿಗೆ ಸಂಬಂಧಪಟ್ಟ ರೂ.5,00,000/–(ಐದು ಲಕ್ಷ) ಗಳ ಬೆಲೆ ಬಾಳುವ 0.50ಸೆಂಟ್ಸ್ ಭೂಮಿ, ಸರ್ವೇ ನಂ:210/1ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದೆ.

ಈ ಆದೇಶವನ್ನು ದಿ:6–1–12ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,**
**ಕೊಡಗು ಜಿಲ್ಲೆ, ಮಡಿಕೇರಿ**

**ಪಿ.ಆರ್. 174**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್ಇ:3:ಸಿಆರ್ಎಂ:122:1997–98, ದಿ:12–12–2011**

ಉಪಸ್ಥಿತರು : **ಹೆಚ್.ಎನ್.ಆನಂದ್**, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು** **ವಿರುದ್ಧ** **ಆರೋಪಿ**

ಆರಕ್ಷಕ ಉಪ ನಿರೀಕ್ಷಕರು, ವಿರಾಜಪೇಟೆ ನಗರ ಠಾಣೆ. — ಮಚ್ಚಿಯಂಡ ಉತ್ತಯ್ಯ ಮತ್ತಿತರರು

**ಪ್ರಕರಣದ ಮುಖ್ಯಾಂಶಗಳು:–**

ದಿ:29–7–97ರಂದು ವಾಹನ ಟಾಟಾ ಮೊಬೈಲ್ ಸಂ:ಕೆಎ–12–2432ರಲ್ಲಿ ಅಕ್ರಮ ಸಾರಾಯಿ ತುಂಬಿರುವ ಚೀಲಗಳನ್ನು ಹಾಕಿಕೊಂಡು ಮಡಿಕೇರಿ ಕಡೆಯಿಂದ ವಿರಾಜಪೇಟೆ ಕಡೆಗೆ ಬರುತ್ತಿರುವುದಾಗಿ ಡಿ.ವೈ.ಎಸ್.ಪಿ.ಯವರಿಗೆ ಬಂದ ಖಚಿತ ವರ್ತಮಾನದಂತೆ ಹೆಚ್.ವೈ.ರಾಜು, ಹೆಚ್.ಸಿ.ನಂ:168ರ ಹಾಗೂ ಹೆಚ್.ಸಿ.42ರ ಬಿ.ಬಿ.ರಮೇಶ್ ರವರನ್ನು ಇಲಾಖಾ ಜೀಪಿನಲ್ಲಿ ಹೋಗಿ ಪ್ರಕರಣ ಪತ್ತೆ ಹಚ್ಚಿ ಬರಲು ಆದೇಶಿಸಿದ ಮೇರೆಗೆ ಇವರುಗಳು ಮಡಿಕೇರಿ ರಸ್ತೆಯ ಛತ್ರ ಕೆರೆಯ ಹತ್ತಿರವಿರುವ ಬಸ್ಸು ತಂಗುದಾಣದ ಹತ್ತಿರ ತಲುಪಿದಾಗ ಇಲಾಖಾ ಜೀಪನ್ನು ನೋಡಿ ಕೆಎ–12–2432ರ ವಾಹನವನ್ನು ನಿಲ್ಲಿಸಿ ಅದರ ಚಾಲಕ ಇಲಾಖೆಯವರನ್ನು ಕಂಡು ವಾಹನದಿಂದಿಳಿದು ಓಡಿ ಹೋದನು. ಇನ್ನೊಬ್ಬ ಅದರೊಳಗಿದ್ದವನನ್ನು ವಿಚಾರಿಸಿ ಹೆಸರು ಮತ್ತು ವಿಳಾಸ ಕೇಳಲಾಗಿ ಮಚ್ಚಿಯಂಡ ಉತ್ತಯ್ಯ ಎಂದು ತಿಳಿಸಿದನು. ಓಡಿಹೋದ ವ್ಯಕ್ತಿಗಳು ಸ್ಥಳದಲ್ಲಿದ್ದ ಇಲಾಖೆಯವರಿಗೆ ಹೆಸರು ಪರಿಚಯವಿರುವಂತವರಾಗಿದ್ದು, ಚಾಲಕನ ಸ್ಥಾನದಲ್ಲಿದ್ದ ವ್ಯಕ್ತಿ ಮುರಾರ್ಜಿ ಇನ್ನೊಬ್ಬ ವ್ಯಕ್ತಿ ತುಳಸಿಯಾಗಿದ್ದು ಆತನು ಸಹ ಇಲಾಖೆಯವರನ್ನು ಕಂಡು ಓಡಿಹೋದನು ಎಂಬುದಾಗಿ ಮತ್ತು ವಾಹನವನ್ನು ಪರಿಶೀಲಿಸಲಾಗಿ ವಾಹನದ ಹಿಂಭಾಗದಲ್ಲಿ 12 ಪ್ಲಾಸ್ಟಿಕ್ ಚೀಲಗಳಲ್ಲಿ 100ಮಿಲಿಯ 4300 ಸಾರಾಯಿ ತುಂಬಿದ್ದ ಪ್ಯಾಕೇಟುಗಳಿರುವುದು ಕಂಡುಬಂತು. ಇಲಾಖಾ ಅಧಿಕಾರಿಗಳು ಹಿಡಿದಿದ್ದ ವ್ಯಕ್ತಿಯನ್ನು ವಿಚಾರಿಸಲಾಗಿ, ಈ ಸಾರಾಯಿ ಪ್ಯಾಕೇಟುಗಳನ್ನು ಸಾಗಿಸಲು ಸರಕಾರದ ರಹದಾರಿ ಇಲ್ಲವೆಂದು ತಿಳಿಸಿದ್ದು, ಓಡಿಹೋದವರು ತುಳಸಿ ಮತ್ತು ಮುರಾರ್ಜಿ ಎಂದು ತಿಳಿಸಿದನು. ಸಾರಾಯಿ ಪ್ಯಾಕೇಟು ತುಂಬಿಸಿದ್ದ ವಾಹನವನ್ನು ಪರಿಶೀಲಿಸಲಾಗಿ ಅದು ನೀಲಿ ಬಣ್ಣದ ಟಾಟಾ ಮೊಬೈಲ್ ಆಗಿದ್ದು ಮತ್ತು ಅದರ ಮುಂದುಗಡೆ ಕೆಎ–12–2432 ಎಂದು ಬರೆದಿರುತ್ತದೆ. ಇಂಜಿನ್ ನಂಬರ್ ಇತರೆ ನಂಬರ್ ನೋಡಲು ಬ್ಯಾನೆಟ್ ತೆರೆದು ಪರಿಶೀಲಿಸಿದಾಗ ಇಂಜಿನ್ ನಂಬರ್.ಜೆಯು.780113 TYPE 483 DL.41.2547100 D.3715, ಚಾಸಿಸ್ ನಂ:37400S JUQ 920879 ಆಗಿರುತ್ತದೆ. ಒಟ್ಟು 12 ಚೀಲಗಳಲ್ಲಿ 4300*100ಮಿಲಿಯ ಪ್ಯಾಕೇಟುಗಳ ಮೇಲೆ ಮೈಸೂರು ಶುಗರ್ ಕಂ.ಲಿ., ಹಾಸನ ಜಿಲ್ಲೆ, ಮದ್ಯಪಾನ ಆರೋಗ್ಯಕ್ಕೆ ಹಾನಿಕರ ಲೆ.ಸಂ:FCS/9/A1BG/96 ಕರ್ನಾಟಕ ಸರ್ಕಾರ ಎಂದು ಬರೆದಿರುತ್ತದೆ. ಒಂದೊಂದು ಚೀಲದಿಂದ ಒಂದೊಂದು ಪ್ಯಾಕೇಟುಗಳನ್ನು ಮಾದರಿಗಾಗಿ ತೆಗೆದುಕೊಂಡು ಬಿಳಿ ಬಟ್ಟೆಯಿಂದ ಹೊಲಿದು ಪ್ಯಾಕ್ ಮಾಡಿ **"ಕೆ"** ಎಂಬ ಅಕ್ಷರದಿಂದ ಸೀಲು ಮಾಡಲಾಯಿತು. ನಂತರ ಪಂಚರ ಸಹಿ ಇರುವ ಚೀಟಿಯನ್ನು ಅದರ ಮೇಲೆ ಅಂಟಿಸಲಾಯಿತು. ಆರೋಪಿಯನ್ನು ವಶಕ್ಕೆ ತೆಗೆದುಕೊಂಡು ಆರೋಪಿಯ ಹೆಸರು ಮತ್ತು ವಿಳಾಸ ಕೇಳಲಾಗಿ ಮಚ್ಚಿಯಂಡ ಎ ಉತ್ತಯ್ಯ ಬಿನ್ ಲೇಟ್ ಅಪ್ಪಯ್ಯ, ಹಳ್ಳಿಗಟ್ಟು ಗ್ರಾಮ, ಪೊನ್ನಂಪೇಟೆ ಎಂದು ತಿಳಿಸಿರುತ್ತಾರೆ. ಆರೋಪಿಗಳು ವಾಹನ ಕೆಎ–12–2432ರಲ್ಲಿ ಹಾಸನ ಜಿಲ್ಲೆ, ಗಂಡಸಿ ಹ್ಯಾಂಡ್ ಪೋಸ್ಟ್‌ನ ಹತ್ತಿರವಿರುವ ರಂಗಪ್ಪನವರಿಂದ ಸಾರಾಯಿ ಪ್ಯಾಕೇಟುಗಳನ್ನು ತಂದಿದ್ದಾಗಿ ಮತ್ತು ಇದನ್ನು ಕೇರಳಕ್ಕೆ ಸಾಗಿಸಿ ಮಾರಲು ತಂದಿದ್ದುದಾಗಿ ವಶಕ್ಕೆ ತೆಗೆದುಕೊಂಡ ಆರೋಪಿ ತಿಳಿಸಿರುತ್ತಾನೆ. ವಾಹನದಲ್ಲಿದ್ದ ದಾಖಲೆಗಳನ್ನು ಪರಿಶೀಲಿಸಲಾಗಿ ಜೆರಾಕ್ಸ್ ಪ್ರತಿಗಳಿದ್ದ ಮೋಟಾರು ವಾಹನ ತೆರಿಗೆ ಚೀಟಿಯ ಮೇಲೆ ನಂ:13854 ಒಳಗಡೆ ಕೆಎ–12–2432 ಎಸ್.ಎಂ.ಪೊನ್ನಪ್ಪ ಬಿನ್ ಎಸ್.ಎಸ್.ಮುದ್ದಪ್ಪ, ಮೈನ್ ರೋಡ್, ವಿರಾಜಪೇಟೆ ಎಂದು ಬರೆದಿರುತ್ತದೆ. ಎಲ್ಲಾ ದಾಖಲಾತಿಗಳ ಜೆರಾಕ್ಸ್ ಪ್ರತಿಗಳನ್ನು ಅಧಿಕಾರಿಗಳು ಮುಂದಿನ ಕ್ರಮಕ್ಕಾಗಿ ವಶಕ್ಕೆ ತೆಗೆದುಕೊಂಡು ಪತ್ರಗಳ ಮೇಲೆ ಪಂಚರ ಸಹಿಯನ್ನು ಮಾಡಲಾಗಿರುತ್ತದೆ. ಆರೋಪಿ, ಸಾರಾಯಿ ಪ್ಯಾಕೇಟುಗಳು, ವಾಹನವನ್ನು ಅಮಾನತುಪಡಿಸಿಕೊಂಡು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34, 43(ಎ)ರಂತೆ ಪೊಲೀಸ್ ಉಪ ನಿರೀಕ್ಷಕರು, ವಿರಾಜಪೇಟೆ ನಗರ ಠಾಣೆ ಇವರ ಮೊಕದ್ದಮೆ ಸಂ:149/97, ದಿ:29–7–97ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಮುಂದಿನ ಕ್ರಮದ ಬಗ್ಗೆ ಅಬಕಾರಿ ವಲಯ ನಿರೀಕ್ಷಕರು, ವಿರಾಜಪೇಟೆ ಇವರಿಗೆ ಪ್ರಕರಣವನ್ನು ಹಸ್ತಾಂತರಿಸಿರುತ್ತಾರೆ.

ವಾಹನದ ಮಾಲೀಕರಿಗೆ 43(ಬಿ)ರಡಿಯಲ್ಲಿ ಕಾರಣ ಕೇಳಿ ನೋಟೀಸು ನೀಡಲಾಗಿದ್ದು, ಅದಕ್ಕೆ ಉತ್ತರವಾಗಿ ವಾಹನದ ಮಾಲೀಕರಾದ ಶ್ರೀ ಎನ್.ಎಂ.ಪೊನ್ನಪ್ಪ ಬಿನ್ ಲೇಟ್ ಎನ್.ಎಸ್.ಮುದ್ದಪ್ಪ, ಮೂರ್ನಾಡು ರಸ್ತೆ, ವಿರಾಜಪೇಟೆ ಇವರ ಪರವಾಗಿ ವಕೀಲರು ವಕಾಲತ್‌ನೊಂದಿಗೆ ಅರ್ಜಿಯನ್ನು ದಿ:7–11–97ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ಕೋರಿರುತ್ತಾರೆ ಮತ್ತು ನ್ಯಾಯಾಲಯ ವಿಧಿಸುವ ಎಲ್ಲಾ ಷರತ್ತುಗಳಿಗೆ ಬದ್ಧರಾಗುವುದಾಗಿ ತಿಳಿಸಿರುತ್ತಾರೆ. ಈ ಹಿನ್ನಲೆಯಲ್ಲಿ ದಿ:11–11–97ರಂದು ಈ ಪ್ರಾಧಿಕಾರದಲ್ಲಿ ವಿಚಾರಣೆಯನ್ನು ನಿಗಧಿಪಡಿಸಿ ಸದರಿ ವಾಹನಕ್ಕೆ ಅಂದಿನ ಅಂದಾಜು ಬೆಲೆ ರೂ.3,00,000/–(ಮೂರು ಲಕ್ಷ)ಗಳನ್ನು ನಿಗಧಿಪಡಿಸಿ ಸದರಿ ಮೊತ್ತಕ್ಕೆ ಸಮನಾದ ಬ್ಯಾಂಕ್ ಗ್ಯಾರೆಂಟಿ ಹಾಗೂ ಸಾಲ್ವೆಂಟ್ ಜಾಮೀನು, ಇಂಡೆಮಿನಿಟಿ ಬಾಂಡ್ ನೀಡಿದಲ್ಲಿ ಬಿಡುಗಡೆಗೊಳಿಸುವುದಾಗಿ ಸೂಚಿಸಲಾಗಿರುತ್ತದೆ. ದಿ:17–12–97ರಂದು ವಾಹನದ ಮಾಲೀಕರು ಮತ್ತು ಅವರ ಪರ ವಕೀಲರು ಹಾಜರಾಗಿ ರೂ.1,00,000/–(ಒಂದು ಲಕ್ಷ)ಗಳ ಬ್ಯಾಂಕ್ ಗ್ಯಾರೆಂಟಿಯನ್ನು ವಿಜಯಾ ಬ್ಯಾಂಕ್, ವಿರಾಜಪೇಟೆ ಇವರಿಂದ ಪಡೆದು ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಉಳಿದ ಮೊತ್ತಕ್ಕೆ ಸಾಲ್ವೆಂಟ್ ಜಾಮೀನುದಾರರನ್ನು ನೀಡಲು ಸಮಯ ಕೋರಿರುವುದರಿಂದ ಪ್ರಕರಣವನ್ನು ಮುಂದೂಡಿ ದಿ:19–12–97ರಂದು ಮತ್ತೆ ಪ್ರಕರಣವನ್ನು ಕರೆಯಲಾಗಿರುತ್ತದೆ. ಸದರಿ ದಿನಾಂಕದಂದು ವಾಹನದ ಮಾಲೀಕರು ಅವರ ಪರ ವಕೀಲರು ಮತ್ತು ಜಾಮೀನುದಾರರು ಹಾಜರಾಗಿ ಇನ್ನುಳಿದ ರೂ.2,00,000/–(ಎರಡು ಲಕ್ಷ)ಗಳ ಮೊತ್ತಕ್ಕೆ ಸಮನಾಗಿ ವಿರಾಜಪೇಟೆ ತಾಲ್ಲೂಕಿನ ಕದನೂರು ಗ್ರಾಮದ ಸರ್ವೇ ನಂ:7ರಲ್ಲಿ 9.57ಎಕರೆ ಜಮೀನು ಹೊಂದಿರುವ ಬಗ್ಗೆ ಜಮಾಬಂದಿ ನಕಲನ್ನು ಹಾಜರುಪಡಿಸಿರುತ್ತಾರೆ. ವಾಹನದ ಮಾಲೀಕರು ಸಲ್ಲಿಸಿರುವ ರೂ.1,00,000/–(ಒಂದು ಲಕ್ಷ)ಗಳ ಬ್ಯಾಂಕ್ ಗ್ಯಾರೆಂಟಿಯನ್ನು ಮತ್ತು ಇನ್ನುಳಿದಂತೆ ರೂ.2,00,000/–(ಎರಡು ಲಕ್ಷ)ಗಳ ಮೊತ್ತಕ್ಕೆ ಸಾಲ್ವೆಂಟ್ ಶ್ಯೂರಿಟಿಯನ್ನು ಪಡೆದುಕೊಂಡು ಷರತ್ತುಬದ್ಧವಾದ ಆದೇಶವನ್ನು ದಿ:19–12–97ರಂದು ನೀಡಿ ವಾಹನವನ್ನು ಮಧ್ಯಂತರಿಕವಾಗಿ ಮಾಲೀಕರ ವಶಕ್ಕೆ ಬಿಡುಗಡೆಗೊಳಿಸಲಾಗಿರುತ್ತದೆ. ವಾಹನವನ್ನು ವಶಕ್ಕೆ ತೆಗೆದುಕೊಂಡಿರುವ ಬಗ್ಗೆ ದಿ:28–12–97 ರಂದು ಸ್ವೀಕೃತಿ ಪಡೆಯಲಾಗಿದೆ. ನಂತರ ವಾಹನದ ಮಾಲೀಕರು ಬ್ಯಾಂಕ್ ಗ್ಯಾರೆಂಟಿ ಅವಧಿಯನ್ನು ವಿಸ್ತರಿಸುವ ಸಂಬಂಧ ಕೆ.ಡಿ.ಸಿ.ಸಿ.ಬ್ಯಾಂಕ್ ಲಿ., ಇವರಿಂದ ರೂ.1,00,000/–(ಒಂದು ಲಕ್ಷ)ಗಳ ಎಫ್.ಡಿ. ರಶೀದಿ ಸಂ:030899ನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ 100ಮಿಲಿಯ 4300 ಸಾರಾಯಿ ಪ್ಯಾಕೇಟುಗಳನ್ನು ಆದೇಶ ಸಂ:ಇಎಕ್ಸ್‌ಇ:ಸಿಆರ್‌ಎಂ:122:97–98, ದಿ:23–1–98ರಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿರುತ್ತದೆ. ತದನಂತರ ದಿ:17–1–01, 7–2–01, 28–2–01, 21–3–01, 27–10–01, 26–11–05, 7–1–06ಗಳಂದು ವಿಚಾರಣೆ ಕರೆಯಲಾಗಿದ್ದು, ದಿ:7–1–06ರಂದು ಮಹಜರ್ ಸ್ವತಂತ್ರ ಸಾಕ್ಷಿದಾರರಾದ ಪಿ.ಎಂ.ಬೆಳ್ಳಿಯಪ್ಪ ಮತ್ತು ಇಲಾಖಾ ಸಾಕ್ಷಿದಾರರಾದ ಬಿ.ಬಿ.ರಮೇಶ್, ಹೆಚ್.ವೈ.ರಾಜು, ಇವರುಗಳ ವಿಚಾರಣೆ ನಡೆದಿರುತ್ತದೆ. ನಂತರ ದಿ:2–2–06, 16–2–06, 4–1–07, 1–2–07, 22–2–07, 20–12–08, 22–8–11, 12–9–11, 28–11–11, 12–12–11ಗಳಂದು ವಿಚಾರಣೆಗೆ ನೋಟೀಸು ನೀಡಲಾಗಿದ್ದು, ಈ ಸಂಬಂಧ ದಿ:17–1–01 ರಂದು ವಾಹನದ ಮಾಲೀಕರು ಮತ್ತು ವಕೀಲರು ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುತ್ತಾರೆ. ದಿ:16–2–06 ರಲ್ಲಿ ವಾಹನದ ಮಾಲೀಕರ ಪರ ವಕೀಲರು ಮಾತ್ರ ಹಾಜರಿದ್ದು, ವಾಹನವನ್ನು ಹಾಜರುಪಡಿಸಿರುವುದಿಲ್ಲ. ನಂತರ ದಿ:12–12–11 ರಂದು ವಾಹನದ ಮಾಲೀಕರು ಹಾಜರಿದ್ದು ವಾಹನವನ್ನು ಹಾಜರುಪಡಿಸಿರುವುದಿಲ್ಲ.

ವಾಹನದ ಮಾಲೀಕರು ಕೇವಲ ಎರಡು ದಿನಾಂಕಗಳಲ್ಲಿ ಮಾತ್ರ ಹಾಜರಿದ್ದು, ಮತ್ತಾವುದೇ ದಿನಾಂಕಗಳಲ್ಲಿ ಹಾಜರಾಗಿರುವುದಿಲ್ಲ. ದಿ:12–12–11ರಂದು ವಿಚಾರಣೆಗೆ ಹಾಜರಾಗಿದ್ದು ವಾಹನವನ್ನು ಹಾಜರುಪಡಿಸಿರುವುದಿಲ್ಲ. ಮೇಲ್ಕಂಡ ಎಲ್ಲಾ ದಿನಾಂಕಗಳಲ್ಲಿ ವಾಹನವನ್ನು ಹಾಜರುಪಡಿಸದೇ ಪ್ರಕರಣದ ವಿಲೇವಾರಿಗೆ ಅಸಹಕಾರ ನೀಡಿರುವುದು, ವಾಹನದ ಮಾಲೀಕರಿಗೆ ಅಬಕಾರಿ ಕಾನೂನಿನ ಅರಿವಿದ್ದು, ಸರ್ಕಾರಕ್ಕೆ ನಷ್ಟ ಉಂಟು ಮಾಡುವ ನೆಪದಲ್ಲಿ ಈ ಕೃತ್ಯವೆಸಗಿರುವುದು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಈ ನ್ಯಾಯಾಲಯದ ಸಂ:ಇಎಕ್ಸ್‌ಇ: ಸಿಆರ್‌ಎಂ:122:97–98, ದಿ:19–12–97ರ ಆದೇಶಗಳಲ್ಲಿನ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದಲ್ಲದೇ ಈ ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುತ್ತಾರೆ.

ಮೇಲಿನ ದಿನಾಂಕಗಳಲ್ಲಿ ವಾಹನದ ಮಾಲೀಕರಿಗೆ ವಾಹನವನ್ನು ಖುದ್ದಾಗಿ ಹಾಜರುಪಡಿಸಬೇಕೆಂದು ಸಾಕಷ್ಟು ಅವಕಾಶವನ್ನು ನೀಡಿ ಸೂಚಿಸಿದ್ದರೂ ಕೂಡ ವಿಫಲರಾಗಿದ್ದು ದಿ:19–12–97ರ ಮಧ್ಯಂತರ ಆದೇಶದ ಷರತ್ತುಗಳನ್ನು ಪಾಲಿಸದೇ ಉಲ್ಲಂಘನೆ ಮಾಡಿರುವುದು ನ್ಯಾಯಾಲಯದಲ್ಲಿ ಕಂಡುಬಂದಿದ್ದು ಪ್ರಕರಣವನ್ನು ವಿಲೇಗೊಳಿಸಲು ಅಸಹಕಾರ ನೀಡಿರುವುದರಿಂದ ವಾಹನ ಟಾಟಾ ಮೊಬೈಲ್ ಸಂ:ಕೆಎ–12–2432ರನ್ನು ಮತ್ತು ಈಗಾಗಲೇ ಕೆ.ಡಿ.ಸಿ.ಸಿ.ಬ್ಯಾಂಕ್ ಲಿ., ಇವರಿಂದ ಎಫ್.ಡಿ.ರಶೀದಿ ಸಂ:030899, ದಿ:20–12–04ರಲ್ಲಿ ರೂ.1,00,000/–(ಒಂದು ಲಕ್ಷ)ಗಳ ಫಿಕ್ಸೆಡ್ ಡೆಪಾಸಿಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ ಸಂ:ಇಎಕ್ಸ್‌ಇ:3:ಸಿಆರ್‌ಎಂ:122:97–98, ದಿ:12–12–2011.**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಆರಕ್ಷಕ ಉಪ ನಿರೀಕ್ಷಕರು, ವಿರಾಜಪೇಟೆ ನಗರ ಠಾಣೆ ರವರ ಪ್ರ.ವ.ವ.ಸಂ:149/97, ದಿ:29–7–97ರಲ್ಲಿ ವಶಪಡಿಸಿಕೊಂಡ ವಾಹನ ಟಾಟಾ ಮೊಬೈಲ್ ಸಂ:ಕೆಎ–12–2432ರನ್ನು ಮಾಲೀಕರು ನ್ಯಾಯಾಲಯಕ್ಕೆ ಹಾಜರುಪಡಿಸದೇ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘನೆ ಮಾಡಿರುವುದರಿಂದ ರೂ.3,00,000/–(ಮೂರು ಲಕ್ಷ)ಗಳ ವಾಹನದ ಮೌಲ್ಯಕ್ಕೆ ಸಮನಾದ ಮೊತ್ತಕ್ಕೆ ಅಂದರೆ ವಾಹನವನ್ನು ಮತ್ತು ಈಗಾಗಲೇ ಕೆ.ಡಿ.ಸಿ.ಸಿ.ಬ್ಯಾಂಕ್ ಲಿ., ಇವರಿಂದ ಎಫ್.ಡಿ.ರಶೀದಿ ಸಂ:030899ರಲ್ಲಿನ ರೂ.1,00,000/–(ಒಂದು ಲಕ್ಷ)ಗಳ ಫಿಕ್ಸೆಡ್ ಡೆಪಾಸಿಟ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದೆ.

ಈ ಆದೇಶವನ್ನು ದಿ:12–12–11ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,**
**ಕೊಡಗು ಜಿಲ್ಲೆ, ಮಡಿಕೇರಿ**

**ಪಿ.ಆರ್. 06**

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ.

**ಸಂ:ಇಎಕ್ಸ್‌ಇ:3:ಸಿಆರ್‌ಎಂ:109:2009–10, ದಿ:26–12–2011**

ಉಪಸ್ಥಿತರು : **ಹೆಚ್.ಎನ್.ಆನಂದ್**, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು,<br>ವಿಶೇಷ ಪೊಲೀಸ್ ಠಾಣೆ, ಅಲಾನಿ, ಕೊಡಗು ಜಿಲ್ಲೆ, ಮಡಿಕೇರಿ. | | ಎಸ್.ಕುಮಾರ್ ಬಿನ್ ಸಣ್ಣನಿಂಗೇಗೌಡ,<br>ಹಳೇಯೂರು ಗ್ರಾಮ, ಬೈಲುಕುಪ್ಪೆ, ಪಿರಿಯಾಪಟ್ಟಣ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:–**

ದಿ:3–6–2010ರಂದು ಆರಕ್ಷಕ ಉಪ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಲಾಟರಿ ನಿಷೇಧ ದಳ, ಕೊಡಗು ಜಿಲ್ಲೆ, ಮಡಿಕೇರಿ ಇವರು ಠಾಣೆಯಲ್ಲಿ ಕರ್ತವ್ಯದಲ್ಲಿರುವಾಗ 13.30ಗಂಟೆಗೆ ಕಛೇರಿ ದೂರವಾಣಿಗೆ ಯಾರೋ ಭಾತ್ಮೀದಾರರು ಕರೆ ಮಾಡಿ ಕುಶಾಲನಗರದ ಕಣಿವೆ ಗ್ರಾಮದ ಶ್ರೀ ರಾಮೇಶ್ವರ ದೇವಸ್ಥಾನದ ಮುಂಭಾಗದ ಅರಳಿ ಮರದ ಬಳಿ ಮರುತಿ ವ್ಯಾನಿನಲ್ಲಿ ಅಕ್ರಮವಾಗಿ ನಕಲಿ ಮದ್ಯದ ಕ್ಯಾನನ್ನು ಇಟ್ಟುಕೊಂಡು ಸಾಗಾಟ ಮಾಡಲು ಹೊಂಚು ಹಾಕುತ್ತಿರುವುದಾಗಿ ಸಿಕ್ಕಿದ ಖಚಿತ ಮಾಹಿತಿ ಮೇರೆಗೆ ಠಾಣೆಗೆ ಪಂಚರನ್ನು ಬರಮಾಡಿಕೊಂಡು ಅವರಿಗೆ ದಾಳಿಯ ವಿಷಯವನ್ನು ತಿಳಿಸಿ ಸಿಬ್ಬಂದಿಗಳೊಂದಿಗೆ ಇಲಾಖಾ ವಾಹನ ಸಂ:ಕೆಎ–12–522ರಲ್ಲಿ ಠಾಣೆಯಿಂದ ಹೊರಟು ಕುಶಾಲನಗರದ ಕಣಿವೆ ಗ್ರಾಮಕ್ಕೆ 15.00ಗಂಟೆಗೆ ತಲುಪಲಾಗಿ ಕಣಿವೆಯ ಶ್ರೀ ರಾಮೇಶ್ವರ ದೇವಸ್ಥಾನದ ಮುಂಭಾಗದ ಅರಳಿ ಮರದ ಬಳಿ ಒಂದು ಬಿಳಿ ಬಣ್ಣದ ಓಮಿನಿ ಕಾರು ನಿಂತಿದ್ದು ಕಂಡುಬಂತು. ಅದರ ಹತ್ತಿರ ಹೋಗಿ ಜೀಪಿನಿಂದ ಇಳಿದು ಕಾರನ್ನು ಸುತ್ತುವರೆದು ಪಂಚರ ಸಮಕ್ಷಮ ಕಾರಿನ ಚಾಲಕನಿಂದ ಕಾರಿನ ಬಾಗಿಲು ತೆಗೆಸಿ ಒಳಗಡೆ ಪರಿಶೀಲಿಸಿದಾಗ ಸದರಿ ವ್ಯಾನಿನ ಮದ್ಯದ ಸೀಟಿನ ಬಳಿ ಒಂದು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನು ಇದ್ದು, ಅದರಲ್ಲಿ ಮದ್ಯದಂತಿರುವ ದ್ರವ ಇರುವುದು ಕಂಡುಬಂತು. ಈ ಬಗ್ಗೆ ಚಾಲಕನನ್ನು ವಿಚಾರಿಸಲಾಗಿ ಮೊದಲು ಸಮರ್ಪಕವಾದ ಉತ್ತರ ನೀಡಲಿಲ್ಲ. ಪುನಃ ವಿಚಾರಿಸಲಾಗಿ ಯಾರೋ ಅವರ ಮೊಬೈಲ್ ಸಂಖ್ಯೆ 9902510536ನಿಂದ ಆತನ ನೋಕ್ಯ 1100 ಮೊಬೈಲ್ ಸಂ:9741119723ರ ಸಂಖ್ಯೆಗೆ ಕರೆ ಮಾಡಿ ಕುಶಾಲನಗರದ ಮಾರ್ಕೆಟ್ ರಸ್ತೆಯಲ್ಲಿರುವ ಕಾವೇರಿ ಗ್ರಾನೈಟ್ ಅಂಗಡಿಯ ಮುಂಭಾಗದಲ್ಲಿ 35ಲೀ. ಕ್ಯಾನಿನಲ್ಲಿ ಡೀಸೆಲ್ ಇದೆ. ಅದನ್ನು ತೆಗೆದುಕೊಂಡು ಕಣಿವೆ ದೇವಸ್ಥಾನದ ಬಳಿ ತೆಗೆದುಕೊಂಡು ಬನ್ನಿ. ಅಲ್ಲಿಂದ ಬೇರೊಬ್ಬರು ಬಂದು ಇನ್ನೊಂದು ಕಡೆ ತೆಗೆದುಕೊಂಡು ಹೋಗುವ ವಿಳಾಸ ತಿಳಿಸುತ್ತಾರೆ ಎಂಬುದಾಗಿ ತಿಳಿಸಿದ ಮೇರೆ ಆತನು ಸದರಿ ಸ್ಥಳದಿಂದ ಕ್ಯಾನನ್ನು ತೆಗೆದುಕೊಂಡು ಬಂದು ಇಲ್ಲಿ ಕಾಯುತ್ತಿರುವುದಾಗಿ ತಿಳಿಸಿದ ಮೇರೆಗೆ ಚಾಲಕನ ಹೆಸರು ವಿಳಾಸ ಕೇಳಲಾಗಿ ಎಸ್. ಕುಮಾರ ಬಿನ್ ಸಣ್ಣನಿಂಗೇಗೌಡ, 35 ವರ್ಷ, ಕಾರು ಚಾಲಕ, ವಾಸ ಹಳೆಯೂರು, ಬೈಲುಕುಪ್ಪೆ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ, ಎಂದು ತಿಳಿಸಿದರು. ನಂತರ ವ್ಯಾನಿನಲ್ಲಿದ್ದ ಪ್ಲಾಸ್ಟಿಕ್ ಕ್ಯಾನನ್ನು ಪಂಚರ ಸಮಕ್ಷಮ ಅಜಮಾಯಿಸಲಾಗಿ ಬಿಳಿ ಬಣ್ಣದ 35ಲೀ. ಸಾಮರ್ಥ್ಯದ ಪ್ಲಾಸ್ಟಿಕ್ ಕ್ಯಾನಿನಲ್ಲಿ 35.000ಲೀ.(ಮೂವತ್ತೈದು)ನಷ್ಟು ಮದ್ಯ ಇರುವುದು ಕಂಡುಬಂದು ಅದರ ಮುಚ್ಚಳವನ್ನು ತೆರೆಯಿಸಿ ನೋಡಲಾಗಿ ರಮ್‌ನಂತೆ ಕಾಣುವ ನಕಲಿ ಮದ್ಯ ಇರುವುದು ಕಂಡುಬಂತು. ಈ ಬಗ್ಗೆ ರಹದಾರಿ ಕೇಳಲಾಗಿ ಸರ್ಕಾರದ ಯಾವುದೇ ರಹದಾರಿ ಇರುವುದಿಲ್ಲವೆಂದು ತಿಳಿಸಿದನು. ಸದರಿ ಪ್ಲಾಸ್ಟಿಕ್ ಕ್ಯಾನಿನಲ್ಲಿದ್ದ ಮದ್ಯದಿಂದ ಮಾದರಿಗಾಗಿ ಒಂದು 180ಮಿಲಿಯ ಕ್ವಾರ್ಟರ್ ಬಾಟಲಿಗೆ ಮದ್ಯವನ್ನು ತುಂಬಿಸಿ ಅದರ ಮುಚ್ಚಳ ಹಾಕಿ ಮುಚ್ಚಳಕ್ಕೆ ಬಿಳಿ ಬಟ್ಟೆಯಿಂದ ಸುತ್ತಿ ದಾರದಿಂದ ಕಟ್ಟಿ ಅರಗಿನಿಂದ 'ಎ' ಎಂಬ ಇಂಗ್ಲೀಷ್ ಅಕ್ಷರದಿಂದ ಸೀಲು ಮಾಡಿ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಲಾಯಿತು. ಸದರಿ ವಾಹನವನ್ನು ಪಂಚರ ಸಮಕ್ಷಮ ಅಜಮಾಯಿಸಲಾಗಿ ಒಂದು ಬಿಳಿ ಬಣ್ಣದ ಮಾರುತಿ ಓಮಿನಿ ಕಾರು ಆಗಿದ್ದು, ಇದರ ಮುಂಭಾಗ ಮತ್ತು ಹಿಂಭಾಗದಲ್ಲಿ ಕೆಎ–03–ಎಂಬಿ–7034 ಎಂಬುದಾಗಿ ನಂಬರ್ ಅಳವಡಿಸಿರುವುದು ಕಂಡುಬಂತು. ಸದರಿ ಕಾರಿನ ಮುಂಭಾಗದ ಕನ್ನಡಿಯ ಕೆಳಗೆ ಇಂಗ್ಲಿಷಿನಲ್ಲಿ ಶ್ರೀ ಮಂಜುನಾಥ ಎಂಬುದಾಗಿ ಅದರ ಕೆಳಗಡೆ ಕನ್ನಡ ಅಕ್ಷರದಲ್ಲಿ ಪ್ರೀತು ಎಂಬುದಾಗಿ ಬರೆದಿರುತ್ತದೆ. ಸದರಿ ಆರೋಪಿಯು ಸರ್ಕಾರದ ಯಾವುದೇ ಪರವಾನಗಿ ಇಲ್ಲದೆ ನಕಲಿ ಮದ್ಯವನ್ನು ಕ್ಯಾನಿನಲ್ಲಿ ಮಾರಾಟ ಮಾಡಲು ತೆಗೆದುಕೊಂಡು ಹೋಗುತ್ತಿದ್ದುದು ಹಾಗೂ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುತ್ತಿದ್ದುದರಿಂದ ಆರೋಪಿ, ಮಾಲು ಮತ್ತು ಕಾರನ್ನು ಪೊಲೀಸ್ ಸ್ವಾಧೀನಕ್ಕೆ ತೆಗೆದುಕೊಂಡು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34, 38ಎ ರನ್ವಯ ಮೊಕದ್ದಮೆ ಸಂ:17/2010, ದಿ:3–6–2010ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಮುಂದಿನ ಕ್ರಮದ ಬಗ್ಗೆ ವಾಹನ ಮತ್ತು ನಕಲಿ ಮದ್ಯವನ್ನು ಅಬಕಾರಿ ಉಪ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಮೇಲ್ಕಂಡ ಅಪರಾಧದಲ್ಲಿ ಭಾಗಿಯಾಗಿರುವ ವಾಹನದ ಮಾಲೀಕರನ್ನು ತಿಳಿಯುವ ಸಂಬಂಧ ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಂದ ಬಿ ಎಕ್ಸ್‌ಟ್ರಾಕ್ಟ್ ಪಡೆದು ದಿ:18–6–10ರಂದು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ಬಿ ಎಕ್ಸ್‌ಟ್ರಾಕ್ಟ್ ನಲ್ಲಿ ನಮೂದಿಸಿರುವಂತೆ ವಾಹನದ ಮಾಲೀಕರ ವಿಳಾಸವು ಈ ರೀತಿ ಕಂಡುಬಂದಿದ್ದು, ಶ್ರೀಮತಿ ಜವರಮ್ಮ ಕೋಂ ಸಣ್ಣನಿಂಗೇಗೌಡ, ನಂ:119, ಬೈಲುಕೊಪ್ಪ ಗ್ರಾಮ ಮತ್ತು ಅಂಚೆ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ, ಇವರಿಗೆ ನಿಯಮ 43(ಬಿ)ರ ಪ್ರಕಾರ ದಿ:23–6–10ರಂದು ಕಾರಣ ಕೇಳಿ ನೋಟಿಸ್ ನೀಡಲಾಗಿರುತ್ತದೆ. ಸದರಿ ನೋಟಿಸಿಗೆ ವಾಹನದ ಅಧಿಕೃತ ಮಾಲೀಕರೆಂದು ಶ್ರೀಮತಿ ಜವರಮ್ಮ ಕೋಂ ಸಣ್ಣನಿಂಗೇಗೌಡ, ನಂ:119, ಬೈಲುಕೊಪ್ಪ ಗ್ರಾಮ ಮತ್ತು ಅಂಚೆ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ, ಇವರು ತಮ್ಮ ಪರ ವಕೀಲರ ಮೂಲಕ ದಿ:28–6–10ರಂದು ವಕಾಲತ್‌ನೊಂದಿಗೆ ಸಮಜಾಯಿಷಿಯನ್ನು ಸಲ್ಲಿಸಿ ಸದರಿ ವಾಹನವನ್ನು ಬಾಡಿಗೆ ಓಡಿಸುತ್ತಿದ್ದು, ವಾಹನದಲ್ಲಿ ಮದ್ಯ ಸಾಗಾಣಿಕೆಯಾಗಿರುವುದು ವಾಹನದ ಮಾಲೀಕರ ಗಮನಕ್ಕೆ ಬಂದಿರುವುದಿಲ್ಲ. ಆದ ಕಾರಣ ಸದರಿ ವಾಹನವನ್ನು ಚಾಲನೆ ಸ್ಥಿತಿಯಿಲ್ಲದೆ ನಿಲ್ಲಿಸಿದಲ್ಲಿ ಜಿಲ್ಲೆಯಲ್ಲಿನ ಮಳೆ ಗಾಳಿಯಿಂದ ಹಾಳಾಗುವ ಸಂಭವವಿರುವುದರಿಂದ, ಇಲಾಖೆ ವಿಧಿಸುವ ಷರತ್ತುಗಳಿಗೆ ಬದ್ಧರಾಗಿ ಇರುವುದಾಗಿ ತಿಳಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಿ ಕೊಡಬೇಕಾಗಿ ಕೋರಿರುತ್ತಾರೆ.

ಪ್ರಕರಣದ ಆರೋಪಿಯಾದ ಎಸ್.ಕುಮಾರ್ ಬಿನ್ ಸಣ್ಣನಿಂಗೇಗೌಡ, ಹಳೇಯೂರು ಗ್ರಾಮ, ಬೈಲುಕುಪ್ಪೆ, ಪಿರಿಯಾಪಟ್ಟಣ ತಾಲ್ಲೂಕು ಇವರು ದಿ:8–7–10ರಂದು ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರ ಮೂಲಕ ಲಿಖಿತ ಹೇಳಿಕೆ ಸಲ್ಲಿಸಿ ನಾನು ಬಾಡಿಗೆ ಹೋದ ಸಂದರ್ಭದಲ್ಲಿ ಕುಶಾಲನಗರ ಆಸ್ಪತ್ರೆ ಪಕ್ಕದಲ್ಲಿ ಹೋಗುತ್ತಿರುವಾಗ ಒಬ್ಬ ವ್ಯಕ್ತಿ ದೂರವಾಣಿ ಮುಖಾಂತರ ಕರೆ ಮಾಡಿ ಕುಶಾಲನಗರ ಗೇಟ್ ಬಳಿ ಇರುವ ಪೆಟ್ರೋಲ್ ಬಂಕ್‌ನಲ್ಲಿ ನನಗೆ ಪರಿಚಯವಿರುವ ಹುಡುಗನೊಬ್ಬನಿರುವನು, ಆತನ ಬಳಿ ಒಂದು ಕ್ಯಾನಿನಲ್ಲಿ ಡೀಸಲ್ ಇರುತ್ತದೆ. ಅದನ್ನು ತೆಗೆದುಕೊಂಡು ಬಾ ಎಂದು ಸೂಚಿಸಿದನು. ಆತನ ಸೂಚನೆಯಂತೆ ಪೆಟ್ರೋಲ್ ಬಂಕ್ ಬಳಿ ಬಂದಾಗ ಹುಡುಗನೊಬ್ಬ ಒಂದು ಟಿ.ವಿ.ಎಸ್.ಬೈಕಿನಲ್ಲಿ ಕುಳಿತಿದ್ದು ಆತನ

ಬಳಿಯಲ್ಲಿ ಒಂದು ಕ್ಯಾನ್ ಇದ್ದು, ಆ ಕ್ಯಾನನ್ನು ನಿನ್ನ ಕಾರಿನಲ್ಲಿ ಹಾಕಿಕೊಂಡು ಕ್ಯಾನ್ ದೊರೆತ ವಿಷಯವನ್ನು ನನಗೆ ಕರೆ ಮಾಡಿದ ವ್ಯಕ್ತಿಗೆ ತಿಳಿಸಿದೆನು. ನಂತರ ಸುಮಾರು ಅರ್ಧ ಗಂಟೆ ಕಣಿವೆ ಶ್ರೀ ರಾಮ ದೇವಸ್ಥಾನದ ಬಳಿ ಕಾರು ನಿಲ್ಲಿಸಿ ಆತನಿಗಾಗಿ ಕಾಯುತ್ತಾ ನಿಂತೆನು. ಆತನಿಗೆ ಪುನಃ ಕರೆ ಮಾಡಿದಾಗ ಮಾರ್ಗದಲ್ಲಿ ಬರುತ್ತಿರುವುದಾಗಿ ತಿಳಿಸಿದನು. ಸುಮಾರು ಒಂದು ಗಂಟೆ ಕಳೆದರೂ ಆತ ಅಲ್ಲಿಗೆ ಬರಲಿಲ್ಲ. ಗಾಬರಿಯಾಗಿ ಅಲ್ಲಿಯೇ ಇದ್ದ ಪರಿಚಯಸ್ಥ ಪೊಲೀಸ್ ಪೇದೆಗೆ ತಿಳಿಸಿ ಅವರನ್ನು ನನ್ನ ಕಾರ್‌ನಲ್ಲಿ ಕ್ಯಾನ್ ಇರುವ ವಿಷಯವನ್ನು ತಿಳಿಸಿದೆನು. ಅವರು ನನ್ನನ್ನು ಅಲ್ಲಿಂದ ರಸ್ತೆ ಕಡೆಗೆ ಕರೆದುಕೊಂಡು ಬಂದು ಅವರ ಮೊಬೈಲ್‌ನಲ್ಲಿ ಮಾಹಿತಿಯಂತೆ ಕ್ಯಾನ್ ದೊರೆತಿದೆ. ಕಣಿವೆ ಭಾಗಕ್ಕೆ ಬನ್ನಿ ಎಂದು ತಿಳಿಸಿದರು. ಸುಮಾರು ಅರ್ಧ ಗಂಟೆಯಲ್ಲಿ ಪೊಲೀಸ್‌ನವರು ಜೀಪ್‌ನಲ್ಲಿ ಆಗಮಿಸಿ ನನ್ನನ್ನು ಕ್ಯಾನ್ ದೊರೆತ ಪೆಟ್ರೋಲ್ ಬಂಕ್ ಬಳಿ ಹೋಗಿ ಬಂಕ್ ಬಳಿ ಇರುವ ಮಾರ್ಬಲ್ ಅಂಗಡಿಯವರನ್ನು ವಿಚಾರಿಸಿ ಅವರನ್ನು ಹಾಗೂ ನನ್ನನ್ನು ಮಡಿಕೇರಿಯ ವಿಶೇಷ ಪೊಲೀಸ್ ಠಾಣೆಗೆ ಕರೆದುಕೊಂಡು ಹೋಗಿ ಪ್ರಶ್ನಿಸಿದರು. ನಾನು ಅವರಿಗೆ ಮೇಲಿನ ವಿಷಯವನ್ನು ತಿಳಿಸಿದೆನು. ನನ್ನ ಪ್ರಕಾರ ಮೇಲ್ಕಂಡ ಘಟನೆಯನ್ನು ಉದ್ದೇಶಪೂರ್ವಕವಾಗಿ ಒಂದು ತಿಂಗಳ ಹಿಂದೆ ನಡೆದಂತಹ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ನಾನು ಸ್ಪರ್ಧಿಸುತ್ತಿದ್ದು, ನನ್ನ ಪ್ರತಿಸ್ಪರ್ಧಿಗಳು ಚುನಾವಣೆಯಿಂದ ಹಿಂದೆ ಸರಿಯುವಂತೆ ಸೂಚಿಸಿದ್ದರು. ಆದರೆ ನಾನು ಅವರ ಮಾತು ಕೇಳದೆ ಚುನಾವಣೆಗೆ ಸ್ಪರ್ಧಿಸಿದ್ದೆ. ನಾನು ಸ್ಪರ್ಧಿಸಿದ ಕಾರಣ ನನ್ನ ಪ್ರತಿಸ್ಪರ್ಧಿಗಳು ಸೋಲಬೇಕಾಯಿತು. ಅವರಿಗೆ ಈ ಕಾರಣದಿಂದ ನನ್ನ ಮೇಲೆ ದ್ವೇಷ ಬಂದು ನನ್ನನ್ನು ಆರೋಪಿಯನ್ನಾಗಿ ಮಾಡಲು ಪೂರ್ವ ನಿಯೋಜಿತವಾಗಿ ಒಂದು ಕ್ಯಾನಿನಲ್ಲಿ ಓಲ್ಡ್ ಮಂಕ್ ರಮ್‌ಗೆ ನೀರನ್ನು ಬೆರೆಸಿ ಅದನ್ನು ಡೀಸೆಲ್ ಎಂದು ನನಗೆ ಸೂಚಿಸಿ ನನ್ನನ್ನು ಈ ಮೊಕದ್ದಮೆಯಲ್ಲಿ ಆರೋಪಿಯನ್ನಾಗಿ ಮಾಡಿರುತ್ತಾರೆ.

ನನಗೆ ನಕಲಿ ಮದ್ಯದ ಬಗ್ಗೆ ಯಾವುದೇ ಜ್ಞಾನವಿರುವುದಿಲ್ಲ. ನನ್ನ ಮೇಲೆ ಹೂಡಿರುವ ಆರೋಪವು ಸತ್ಯಕ್ಕೆ ದೂರವಾಗಿದ್ದು, ನಾನು ನಿರಪರಾಧಿಯಾಗಿರುತ್ತೇನೆ. ಆದುದರಿಂದ ಸದರಿ ಮೊಕದ್ದಮೆಯಲ್ಲಿ ಜಪ್ತುಪಡಿಸಿರುವ ವಾಹನವನ್ನು ಇಲಾಖಾ ಮೂಲಕ ಬಿಡುಗಡೆಗೊಳಿಸಿಕೊಡಬೇಕಾಗಿ ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ರವರಿಗೆ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ರವರು ದಿ:14–7–10 ರಂದು ಸದರಿಯವರ ಹೇಳಿಕೆಯನ್ನು ಲಗತ್ತಿಸಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ದಿ:24–9–10ರಂದು ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರಿಗೆ ಪತ್ರ ಮುಖೇನ ತಿಳಿಯಪಡಿಸಿ ಜಪ್ತುಪಡಿಸಿಕೊಂಡ ನಕಲಿ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸುವಂತೆ ತಿಳಿಸಲಾಗಿರುತ್ತದೆ. ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ರವರು ಸದರಿ ಮದ್ಯವನ್ನು ಕರ್ನಾಟಕ ಸರ್ಕಾರದ ಪದನಿಮಿತ್ತ ಮುಖ್ಯ ರಾಸಾಯನಿಕತಜ್ಞರು, ಸಹಾಯಕ ರಸಾಯನ ಪರೀಕ್ಷಕರು, ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಲ್ಲಿ ರಾಸಾಯನಿಕ ಪರಿಕ್ಷೆಗೆ ಒಳಪಡಿಸಿದ್ದು, ದಿ:30–10–10ರ ರಾಸಾಯನಿಕ ತಜ್ಞರ ವರದಿ ಸಂ:ಸಿಸಿಎಲ್:5918/2010ರಲ್ಲಿ 180ಮಿಲಿಯ ಸದರಿ ಮದ್ಯದಲ್ಲಿ 38.8° ಯು.ಪಿ. ಮದ್ಯಸಾರ ಅಂಶ ಇರುವುದಾಗಿ ಮತ್ತು ಅದು ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್ಸ್ ನಿಗಧಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅದು ನಕಲಿ ಮದ್ಯವಾಗಿರುತ್ತದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ದಿ:27–10–10, 3–11–10, 19–11–10, 26–11–10, 24–1–11, 26–4–11, 26–5–11, 28–11–11, 26–12–11ಗಳಂದು ಹಾಜರಾಗಲು ಸೂಚಿಸಲಾಗಿದ್ದು, 27–10–10, 3–11–10, 24–1–11, 26–8–11, 12–12–11, 16–12–11, 26–12–11ಗಳಂದು ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಿರುವುದಿಲ್ಲ.

ವಾಹನದ ಮಾಲೀಕರು ಈ ನ್ಯಾಯಾಲಯದ ಮುಂದೆ ತನ್ನ ವಾಹನ ಮಾರುತಿ ಓಮಿನಿ ಸಂ:ಕೆಎ–03–ಎಂಬಿ–7034ರನ್ನು ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡುವಂತೆ ಸಲ್ಲಿಸಿದ ಅರ್ಜಿಯ ಬಗ್ಗೆ ಸರ್ಕಾರಿ ಅಭಿಯೋಜಕರ ಮತ್ತು ತನಿಖಾಧಿಕಾರಿಗಳ ವಾದ ವಿವಾದಗಳನ್ನು ಕೇಳಲಾಯಿತು. ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಸಲ್ಲಿಸಿದ ಅರ್ಜಿಯ ಬಗ್ಗೆ ತನಿಖಾಧಿಕಾರಿಗಳ ವರದಿಯಲ್ಲಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಟ್ಟುಕೊಟ್ಟಲ್ಲಿ ಪುನಃ ಇಂತಹುದೇ ಪ್ರಕರಣಕ್ಕೆ ಬಳಸುವ ಸಾಧ್ಯತೆ ಇರುತ್ತದೆ ಎಂದು ತಿಳಿಸಿ ಅರ್ಜಿದಾರರ ಕೋರಿಕೆಯಂತೆ ವಾಹನವನ್ನು ಬಿಡುಗಡೆಗೊಳಿಸಬಾರದೆಂದು ಪ್ರಾರ್ಥಿಸಿದ್ದಾರೆ. ಆದುದರಿಂದ ಒಂದು ವೇಳೆ ಮಾಲೀಕರ ಕೋರಿಕೆಯಂತೆ ವಾಹನ ಮಾರುತಿ ಓಮಿನಿ ಸಂ:ಕೆಎ–03–ಎಂಬಿ–7034ರನ್ನು ಅವರ ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಟ್ಟಲ್ಲಿ ಅವರು ಮತ್ತೆ ಸದರಿ ವಾಹನವನ್ನು ಇಂತಹದೇ ಕೃತ್ಯದಲ್ಲಿ ಅಥವಾ ಇನ್ನಾವುದೇ ರೀತಿಯ ಅಕ್ರಮ ಚಟುವಟಿಕೆಗಳಿಗೆ ಬಳಸುವ ಸಾಧ್ಯತೆ ಇರುತ್ತದೆ. ಸದರಿ ವಾಹನದ ಮೇಲೆ ಇಲಾಖೆಯಲ್ಲಿ ದಾಖಲಾಗಿರುವ ಮೊಕದ್ದಮೆಯು ಅಂತಿಮ ತೀರ್ಮಾನ ಆಗುವ ಮೊದಲೇ ಸದರಿ ವಾಹನವನ್ನು ಬೇರೆಯವರ ಹೆಸರಿಗೆ ಪರಭಾರೆ ಮಾಡುವುದಾಗಲೀ, ಮಾರಾಟ ಮಾಡುವುದಾಗಲೀ ಅಥವಾ ವಾಹನದ ಆಕಾರ, ಬಣ್ಣ, ನೋಂದಣಿ ಸಂಖ್ಯೆ ಇವುಗಳನ್ನು ಬದಲಾವಣೆ ಮಾಡುವ ಸಾಧ್ಯತೆ ಇರುವುದರಿಂದ ಹಾಗೂ ರಾಜ್ಯದ ಬೊಕ್ಕಸಕ್ಕೆ ನಷ್ಟ ಉಂಟು ಮಾಡುವ ಹಾಗೂ ಇನ್ನಾವುದೇ ರೀತಿಯಲ್ಲಿ ಸರ್ಕಾರಕ್ಕೆ ನಷ್ಟ ಮಾಡುವ ಸಾಧ್ಯತೆ ಇರುತ್ತದೆ. ಅಲ್ಲದೇ ಸದರಿ ವಾಹನವನ್ನು ನ್ಯಾಯಾಲಯಕ್ಕೆ ಹಾಜರುಪಡಿಸಲು ಸೂಚಿಸಿದಲ್ಲಿಯೂ ಕೂಡ ಹಾಜರುಪಡಿಸದೇ ಇರುವ ಸಾಧ್ಯತೆ ಇರುತ್ತದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಾರುತಿ ಓಮಿನಿ ಕಾರನ್ನು ಅವರ ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡುವುದು ಸೂಕ್ತವಲ್ಲವೆಂದು ಪರಿಗಣಿಸಿ ವಾಹನದ ಮಾಲೀಕರ ಕೋರಿಕೆಯನ್ನು ತಿರಸ್ಕರಿಸಿ ದಿ:12–12–11 ರಂದು ಆದೇಶ ನೀಡಲಾಗಿರುತ್ತದೆ. ನಂತರ ದಿ:16–12–11, 26–12–11ರಂದು ವಿಚಾರಣೆಯನ್ನು ಕರೆಯಲಾಗಿದ್ದು, ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಹಾಜರಿರುವುದಿಲ್ಲ. ಈ ಹಿನ್ನಲೆಯಲ್ಲಿ ಈಗಾಗಲೇ ರಾಸಾಯನಿಕ ವರದಿಯ ಪ್ರಕಾರ ನಕಲಿ ಮದ್ಯವೆಂದು ದೃಢಪಟ್ಟಿರುವುದರಿಂದ ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದು ಅವರ ಸ್ವಂತ ಲಾಭಕ್ಕಾಗಿ ಈ ಕೃತ್ಯವೆಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ ಮತ್ತು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಪ್ರಕರಣ ನಡೆಸಲು ಅಸಹಕಾರ ನೀಡುತ್ತಿದ್ದು ಮತ್ತು ವಾಹನದ ಮಾಲೀಕರು ಪ್ರಕರಣವನ್ನು ವಿಲೇಗೊಳಿಸಲು ಯಾವುದೇ ಆಸಕ್ತಿ ವಹಿಸುತ್ತಿಲ್ಲವಾದುದರಿಂದ

ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರು ಸಂಬಂಧಪಟ್ಟ ವಾಹನ ಮಾರುತಿ ಓಮಿನಿ ಸಂ:ಕೆಎ–03–ಎಂಬಿ–7034ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ವಾದಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶ.

**ಆದೇಶ ಸ0:ಇಎಕ್ಸ್ಇ:ಡಿಟಿಸಿಆರ್ಎ0:109:2009–10, ದಿ:26–12–2011**

ಹೆಚ್.ಎನ್.ಆನಂದ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 43ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿ, ಆರಕ್ಷಕ ಉಪ ನಿರೀಕ್ಷಕರು, ವಿಶೇಷ ಪೊಲೀಸ್ ಠಾಣೆ, ಲಾಟರಿ ನಿಷೇಧ ದಳ, ಕೊಡಗು ಜಿಲ್ಲೆ, ಮಡಿಕೇರಿ ರವರ ಪ್ರ.ವ.ವ.ಸಂ:17/10, ದಿ:3–6–10ರಲ್ಲಿ ವಶಪಡಿಸಿಕೊಂಡ ವಾಹನ ಮಾರುತಿ ಓಮಿನಿ ಸಂ:ಕೆಎ–03–ಎಂಬಿ–7034ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದೆ.

ಈ ಆದೇಶವನ್ನು ದಿ:26–12–11ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,**
**ಕೊಡಗು ಜಿಲ್ಲೆ, ಮಡಿಕೇರಿ**

**ಪಿ.ಆರ್. 07**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, "ಕಂದಾಯ ಭವನ" ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್–43/2011, ದಿನಾಂಕ:4–2–2012**

**ಅರ್ಜಿದಾರರು:**

1) ಸಿದ್ದಲಿಂಗಪ್ಪ ತಂದೆ: ಲೇಟ್ ಸಿದ್ದಯ್ಯ
2) ನರಸಮ್ಮ ಕೋಂ ಸಿದ್ದಲಿಂಗಯ್ಯ
3) ಮಂಗಳ ಗೌರಿ ತಂದೆ: ಸಿದ್ದಲಿಂಗಪ್ಪ
4) ಎಸ್.ಕುಮಾರ ಬಿನ್ ಸಿದ್ದಲಿಂಗಪ್ಪ
5) ಶಂಕರ ಬಿನ್ ಸಿದ್ದಲಿಂಗಪ್ಪ

ವಿಳಾಸ: ಚೌಡೇಶ್ವರಿ ಬೀದಿ, ಕೆ.ಆರ್.ಎಸ್.ಅಗ್ರಹಾರ
ಬಿ.ಎಂ.ರಸ್ತೆ, ಕುಣಿಗಲ್ ಟೌನ್, ಕುಣಿಗಲ್ 572 130

**ಪ್ರತಿವಾದಿಗಳು:**

1) ಎ & ಬಿ ಅಸೋಸಿಯೇಟ್ಸ. ಹ್ಯೂಮನ್ ರಿಸೋರ್ಸ ಕನ್‌ಸಲ್ಟಂಟ್ ಬೆಂಗಳೂರು
2) ದಿ ನ್ಯೂ ಇಂಡಿಯಾ ಅಶ್ಯೂರನ್ಸ ಕಂ.ಲಿ. ರೀಜನಲ್ ಆಫೀಸ್ 2–ಬಿ ಯುನಿಟಿ ಬಿಲ್ಡಿಂಗ್, ಬೆಂಗಳೂರು–27

**ಪ್ರಕಟಣೆ**

1 ಮತ್ತು 2ನೇ ಅರ್ಜಿದಾರರ ಮತ್ತು ಮೃತ ಎ.ಸಿದ್ದರಾಜು ರವರು 1ನೇ ಪ್ರತಿವಾದಿಗಳಿಗೆ ಸಂಬಂಧಪಟ್ಟ ಸಂಸ್ಥೆಯ ಸರ್ವೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ 15–2–2011ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತಿಳಿಸಿರುತ್ತಾರೆ ಹಾಗೂ ಮೃತ ಅವಲಂಬಿತರಿಗೆ ವಿತರಿಸಲು ಪರಿಹಾರ ಮೊತ್ತ ರೂ.4,42,540–00 ಗಳನ್ನು 2ನೇ ಪ್ರತಿವಾದಿಗಳಾದ ವಿಮಾ ಕಂಪನಿಯವರು, ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಠೇವಣಿ ಮಾಡಿರುತ್ತಾರೆ. ಅರ್ಜಿದಾರರು ಪ್ರತಿವಾದಿಗಳು ಠೇವಣಿ ಮಾಡಿರುವ ಮೊತ್ತವನ್ನು ಮೃತನ ವಾರಸುದಾರರಾದ ತಮಗೆ ವಿತರಿಸಲು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ, ತುಮಕೂರು

**ಪಿ.ಆರ್. 177**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ

## "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:03/2012, ದಿನಾಂಕ:23-01-2012**

**ಅರ್ಜಿದಾರರು:**

1) ಅಮೀರ್ ಸಾಬ್ ತಂದೆ: ಮೊಹ್ಮದ್ ಹಯಾತ್, ವಯಸ್ಸು 60ವರ್ಷ
2) ಶ್ರೀಮತಿ ಜೈಬುನ್‌ಬಿ ಪತಿ: ಅಮೀರ್‌ಸಾಬ್, ವಯಸ್ಸು 56ವರ್ಷ
3) ತಬಸ್ಸುಮ್ ಬಾನು ತಂದೆ:ಲೇಟ್ ಗೌಸ್‌ಮೊಹಿದ್ದೀನ್, ವಯಸ್ಸು 28ವರ್ಷ
4) ಸಾನಿಯಾ ಕೌಸರ್ ತಂದೆ: ಲೇಟ್ ಗೌಸ್‌ಮೊಹಿದ್ದೀನ್, ವಯಸ್ಸು 9ವರ್ಷ
5) ಹಯಾತ್ ತಂದೆ:ಲೇಟ್ ಗೌಸ್‌ಮೊಹಿದ್ದೀನ್, ವಯಸ್ಸು 2 ವರ್ಷ5 ತಿಂಗಳು (4,5ನೇ ಅರ್ಜಿದಾರರು ಅಪ್ರಾಪ್ತರಾಗಿದ್ದು ಅವರ ಪರ ಅವರ ಸ್ವಾಭಾವಿಕ ಸಂರಕ್ಷಕರಾದ ತಾಯಿ 3ನೇ ಅರ್ಜಿದಾರರು ಪ್ರತಿನಿಧಿಸುವರು.

**ಪ್ರತಿವಾದಿಗಳು:**

1) ನಯಾಜ್ ಪಾಷಾ ತಂದೆ: ಪ್ಯಾರುಸಾಬ್ ಪ್ರಾಪ್ತರು, # 143, ಕೆಂಬಳಾಲು ಪೋಸ್ಟ್, ಹೆಬ್ಬೂರು ಹೋಬಳಿ, ತುಮಕೂರು ತಾಲ್ಲೂಕು ಮತ್ತು ಜಿಲ್ಲೆ.
2) ದಿ ನ್ಯೂ ಇಂಡಿಯಾ ಅಶ್ಯೂರನ್ಸ ಕಂ.ಲಿ. ತುಮಕೂರು ಕಾಂಪ್ಲೆಕ್ಸ್, ಬಿ.ಹೆಚ್.ರಸ್ತೆ ತುಮಕೂರು.

**ವಿಳಾಸ:**
ದೊಡ್ಡಯ್ಯನಕಟ್ಟೆ ಪಾಳ್ಯ, ಹೆಬ್ಬೂರು ಹೋಬಳಿ,
ತುಮಕೂರು ತಾಲ್ಲೂಕು

**ಪ್ರಕಟಣೆ**

1ನೇ ಅರ್ಜಿದಾರರ ಮಗ ಲೇಟ್ ಗೌಸ್‌ಮೊಹಿದ್ದೀನ್ ಎಂಬುವವರು 1ನೇ ಪ್ರತಿವಾದಿಗಳ ಟ್ರಕ್ ಸಂಖ್ಯೆ:ಕೆಎ-06-8403 ಟ್ರಕ್ಕಿನಲ್ಲಿ ಕ್ಲೀನರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:14-05-2011 ರಂದು ಬೆಳಿಗ್ಗೆ 10.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ, ತುಮಕೂರು

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ
## "ಕಂದಾಯ ಭವನ" ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:04/2012, ದಿನಾಂಕ:24-01-2012**

**ಅರ್ಜಿದಾರರು:**

1) ಪಿ.ಕೆ.ಗುರುವಾರೆಡ್ಡಿ ತಂದೆ: ಲೇಟ್ ಕೇಶವ ರೆಡ್ಡಿ, ವಯಸ್ಸು 53ವರ್ಷ
2) ಸುಲೋಚನಮ್ಮ ಪತಿ:ಪಿ.ಕೆ.ಗುರುವಾರೆಡ್ಡಿ ವಯಸ್ಸು 45ವರ್ಷ

ಈರ್ವರ ವಿಳಾಸ:
ಗುಡ್ಡದರಂಗೇನಹಳ್ಳಿ, ಚಿತ್ರದುರ್ಗ ತಾಲ್ಲೂಕು

**ಪ್ರತಿವಾದಿಗಳು:**

1) ಹೇಮಣ್ಣ ರೆಡ್ಡಿ ತಂದೆ: ಕೇಶವ ರೆಡ್ಡಿ ಶಾಮಲಾ ಟ್ರೇಡಿಂಗ್ ಕಂ. ಆರ್‌ಎಂಸಿ ಯಾರ್ಡ, ಸಿ. ಬ್ಲಾಕ್, ಚಿತ್ರದುರ್ಗ
2) ನ್ಯಾಷನಲ್ ಇನ್‌ಶ್ಯೂರನ್ಸ ಕಂ.ಲಿ. ಡಿವಿಜನಲ್ ಆಫೀಸ್ ನಂ.10, ಚಿತ್ರದುರ್ಗ

## ಪ್ರಕಟಣೆ

ಅರ್ಜಿದಾರರ ಮಗ ಲೇಟ್ ಗುರುವಾರೆಡ್ಡಿ ಎಂಬುವವರು 1ನೇ ಪ್ರತಿವಾದಿಯ ಮಾರುತಿ ಸುಝುಕಿ ಸ್ವಿಫ್ಟ್ ಕಾರ್ ಸಂಖ್ಯೆ:ಕೆಎ–16–ಎಮ್–4934 ಕಾರಿನಲ್ಲಿ ಚಾಲಕರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:15–05–2010 ರಂದು ಸಾಯಂಕಾಲ 4.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ
## "ಕಂದಾಯ ಭವನ" ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್–48/2011, ದಿನಾಂಕ:30–01–2012**

**ಅರ್ಜಿದಾರರು:**

1. ಶಾರದಾ ಬಾಯಿ ಪತಿ: ಲೇಟ್ ಚಂದ್ರಾನಾಯ್ಕ, ವಯಸ್ಸು 23 ವರ್ಷ
2. ಸುಹಾಸ್ ಚಂದ್ರಲಾಲ್ ತಂದೆ: ಲೇಟ್ ಚಂದ್ರಾನಾಯ್ಕ, ವಯಸ್ಸು 05 ವರ್ಷ
3. ಇಂದುಶ್ರೀ ತಂದೆ: ಲೇಟ್ ಚಂದ್ರಾನಾಯ್ಕ, 03 ವರ್ಷ
4. ದೇವಲಿ ಬಾಯಿ ಪತಿ: ಹನುಮಾ ನಾಯ್ಕ, 48 ವರ್ಷ

ವಾಸ: ಜಾಜುರಾಯನ ಹಳ್ಳಿ, ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆ

**ಪ್ರತಿವಾದಿಗಳು:**

ಎಕ್ಸಿ ಕ್ಯೂಟಿವ್ ಇಂಜಿನಿಯರ್(ಎಲೆಕ್ಟ್ರಿಕಲ್)
ಟಿಎಲ್ ಮತ್ತು ಎಸ್.ಎಸ್.ಡಿವಿಜನ್
ಕೆ ಪಿ ಟಿ ಸಿ ಎಲ್, ತುಮಕೂರು

## ಪ್ರಕಟಣೆ

ಚಂದ್ರಾ ನಾಯಕ್, ಲೈನ್‌ಮೆನ್–ಟಿಎಲ್ಐ ಪಾವಗಡ ಕ್ಯಾಂಪ್ ರವರು ಪ್ರತಿವಾದಿಗಳಿಗೆ ಸಂಬಂಧಪಟ್ಟ ಸಂಸ್ಥೆಯ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ಸಂಭವಿಸಿದ ಅಪಘಾತದಿಂದ 05–10–2011ರಂದು ಮೃತರಾಗಿರುತ್ತಾರೆಂದು ತಿಳಿಸಿರುತ್ತಾರೆ ಹಾಗೂ ಮೃತ ಅವಲಂಬಿತರಿಗೆ ವಿತರಿಸಲು ಪರಿಹಾರ ಮೊತ್ತ ರೂ.4,03,320–00 ಗಳನ್ನು ಪ್ರತಿವಾದಿಗಳು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಠೇವಣಿ ಮಾಡಿರುತ್ತಾರೆ. ಪ್ರತಿವಾದಿಗಳು ಠೇವಣಿ ಮಾಡಿರುವ ಮೊತ್ತವನ್ನು ಮೃತರ ವಾರಸುದಾರರಾದ ತಮಗೆ ವಿತರಿಸಬೇಕೆಂದು ದಿನಾಂಕ:23–1–2012ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 146**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ
## "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:07/2012, ದಿನಾಂಕ:4-02-2012**

**ಅರ್ಜಿದಾರರು:**

1) ಮುದ್ದಯ್ಯ ತಂದೆ: ದೊಡ್ಡಯ್ಯ, ವಯಸ್ಸು 70ವರ್ಷ
2) ಕಾವಲಮ್ಮ ಪತಿ: ಮುದ್ದಯ್ಯ, ವಯಸ್ಸು 65ವರ್ಷ

**ಈರ್ವರ ವಿಳಾಸ:**
ಗೊಂದಿಹಳ್ಳಿ, ಬುಕ್ಕಾಪಟ್ಟಣ ಹೋಬಳಿ,
ಕೊರಟಗೆರೆ ತಾಲ್ಲೂಕು

**ಪ್ರತಿವಾದಿಗಳು:**

1) ಭೀಮರಾಜ ಜಿ.ಹೆಚ್. ತಂದೆ:ಪುಟ್ಟ ಹನುಮಂತರಾಯ, ನಂ.23, ಗೊಂದಿಹಳ್ಳಿ, ಕೊರಟಗೆರೆ ತಾಲ್ಲೂಕು
2) ಶ್ರೀರಾಮ ಜನರಲ್ ಇನ್‌ಷ್ಯೂರನ್ಸ ಕಂ.ಲಿ. ಇ 8, ರೀಕೋ ಇಂಡಸ್ಟ್ರಿಯಲ್ ಏರಿಯಾ ಸೀತಾಪುರ, ಜೈಪುರ, ರಾಜಸ್ಥಾನ್ ರಾಜ್ಯ

### ಪ್ರಕಟಣೆ

ಅರ್ಜಿದಾರರ ಮಗ ಮೃತ ನಾಗರಾಜು ತಂದೆ:ಮುದ್ದಯ್ಯ ಎಂಬುವವರು 1ನೇ ಪ್ರತಿವಾದಿಗಳ ಟ್ರ್ಯಾಕ್ಟರ್ ಟ್ರೈಲರ್ ಸಂಖ್ಯೆ:ಕೆಎ-13-7760-7761 ಟ್ರ್ಯಾಕ್ಟರ್ ಟ್ರೈಲರಿನಲ್ಲಿ ಚಾಲಕರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:15-09-2011 ರಂದು ಬೆಳಿಗ್ಗೆ 10.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 178**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ
## "ಕಂದಾಯ ಭವನ" ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:55/2011, ದಿನಾಂಕ:26-12-2011**

**ಅರ್ಜಿದಾರರು:**

1. ಲಕ್ಷ್ಮಯ್ಯ S/o ಲೇಟ್ ಚಿಕ್ಕಣ್ಣ, ವಯಸ್ಸು 52 ವರ್ಷ
2. ಲಲಿತಮ್ಮ D/o ಲಕ್ಷ್ಮಯ್ಯ ಮತ್ತು ಮೃತ ಜಯಮ್ಮ
3. ಪ್ರೇಮಲತಾ D/o ಲಕ್ಷ್ಮಯ್ಯ ಮತ್ತು ಮೃತ ಜಯಮ್ಮ
4. ನರಸಿಂಹಮೂರ್ತಿ S/o ಲಕ್ಷ್ಮಯ್ಯ ಮತ್ತು ಮೃತ ಜಯಮ್ಮ

**ವಿಳಾಸ:**
ನರಸಾಪುರ ವಿಲೇಜ್
ಕಸಬಾ ಹೋಬಳಿ ತುಮಕೂರು, ತಾಲ್ಲೂಕು.

**ಪ್ರತಿವಾದಿಗಳು:**

1) ನಾಗರಾಜ ತಂದೆ:ಪುಟ್ಟಯ್ಯ, ವಯಸ್ಸು: 50ವರ್ಷ ವಿಳಾಸ: ಕುಪ್ಪೂರು ವಿಲೇಜ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು
2) ಗಂಗಣ್ಣ @ ಗಂಗಾಧರಯ್ಯ, ತಂದೆ:ಗಂಗಸಿದ್ದಯ್ಯ, ವಯಸ್ಸು 38ವರ್ಷ ವಿಳಾಸ:ಹೊನ್ನೇನಹಳ್ಳಿ ವಿಲೇಜ್, ಶಿರಾ ಗೇಟ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು
3) ಅಬೀಬುಲ್ಲಾ@ಬಾಬು ತಂದೆ:ಅಬ್ದುಲ್ ಉಮರ್, ವಯಸ್ಸು 48 ವರ್ಷ ವಾಸ:ಟೂಡಾ ಲೇಔಟ್, ಶಿರಾ ಗೇಟ್, ತುಮಕೂರು

### ಪ್ರಕಟಣೆ

1ನೇ ಅರ್ಜಿದಾರರ ಪತ್ನಿ ಲೇಟ್ ಜಯಮ್ಮ, ಎಂಬುವವರು ಪ್ರತಿವಾದಿಗಳ ಬ್ರಿಕ್ ಫ್ಯಾಕ್ಟ್ರಿಯಲ್ಲಿ ಕೂಲಿ ಕಾರ್ಮಿಕಳಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:16-03-11 ರಂದು ಬೆಳಿಗ್ಗೆ 10.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ

ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.**

**ಸಂ:ಕಾಅತು:ಕಾಪಕಾ:ಸಿಆರ್:56/2011, ದಿನಾಂಕ:26-12-2011**

**ಅರ್ಜಿದಾರರು:**

1. ರಾಜಣ್ಣ S/o ಲೇಟ್ ನರಸಯ್ಯ, ವಯಸ್ಸು 55 ವರ್ಷ

**ವಿಳಾಸ:**
ನರಸಾಪುರ ವಿಲೇಜ್
ಕಸಬಾ ಹೋಬಳಿ ತುಮಕೂರು, ತಾಲ್ಲೂಕು.

**ಪ್ರತಿವಾದಿಗಳು:**

1) ನಾಗರಾಜ ತಂದೆ:ಪುಟ್ಟಯ್ಯ, ವಯಸ್ಸು:50ವರ್ಷ
ವಿಳಾಸ: ಕುಪ್ಪೂರು ವಿಲೇಜ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು
2) ಗಂಗಣ್ಣ @ ಗಂಗಾಧರಯ್ಯ, ತಂದೆ:ಗಂಗಸಿದ್ದಯ್ಯ, ವಯಸ್ಸು 38ವರ್ಷ
ವಿಳಾಸ: ಹೊನ್ನೇನಹಳ್ಳಿ ವಿಲೇಜ್,ಶಿರಾ ಗೇಟ್, ಕಸಬಾ ಹೋಬಳಿ,
ತುಮಕೂರು ತಾಲ್ಲೂಕು
3) ಅಬೀಬುಲ್ಲಾ@ಬಾಬು ತಂದೆ:ಅಬ್ದುಲ್ ಉಮರ್, ವಯಸ್ಸು 48 ವರ್ಷ
**ವಿಳಾಸ:** ಟೂಡಾ ಲೇಔಟ್, ಶಿರಾ ಗೇಟ್, ತುಮಕೂರು

**ಪ್ರಕಟಣೆ**

ಅರ್ಜಿದಾರರ ತಂಗಿ ಲೇಟ್ ಗಂಗಮ್ಮ, ಎಂಬುವವರು ಪ್ರತಿವಾದಿಗಳ ಬ್ರಿಕ್ ಫ್ಯಾಕ್ಟ್ರಿಯಲ್ಲಿ ಕೂಲಿ ಕಾರ್ಮಿಕಳಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:16-03-11 ರಂದು ಬೆಳಿಗ್ಗೆ 10.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 145**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.**

**ಸಂ:ಕಾಅತು:ಕಾಪಕಾ:ಸಿಆರ್:51/2011 ದಿನಾಂಕ:23-12-2011**

**ಅರ್ಜಿದಾರರು:**

1. ಶಿಲ್ಪಾ ಪತಿ: ಲೇಟ್ ರಮೇಶ್,
ವಯಸ್ಸು 22 ವರ್ಷ

**ವಿಳಾಸ:** ರೆಡ್ಡಿ ಕಾಲನಿ, ಬಂಡೆ ಕೆಳಗಡೆ
ವೆಂಕಟೇಶ್ವರ ಎಕ್ಸಟೆನ್‌ಷನ್
ಪಾವಗಡ ಟೌನ್. ತುಮಕೂರು ಜಿಲ್ಲೆ

**ಪ್ರತಿವಾದಿಗಳು:**

1) ರಾಮಾಂಜಿನಪ್ಪ ತಂದೆ:ಹನುಮಂತಪ್ಪ, ವಯಸ್ಸು:46ವರ್ಷ
**ವಿಳಾಸ:** ಕುರುಬರ ಹಳ್ಳಿ ವಿಲೇಜ್,ನಾಲಗಾನ ಹಳ್ಳಿ ಪೋಸ್ಟ್,
ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ.
2) ದಿ ಮ್ಯಾನೇಜರ್ ಓರಿಯಂಟಲ್ ಇನ್‌ಷ್ಯೂರನ್ಸ ಕಂ.ಲಿ, ಬ್ರ್ಯಾಂಚ್ ಆಫೀಸ್, ಡೋರ್ ನಂ:15-1836, ಸೂರ್ಯ ಟವರ್ಸ್, ಸಿ.ಬಿ. ರೋಡ ತಡಿಪತ್ರಿ, ಎ.ಪಿ.ಸ್ಟೇಟ್,
**ಸರ್ವಿಸ್ ಸೆಂಟರ್**
ಬ್ರ್ಯಾಂಚ್ ಆಫೀಸ್, ಟಿಜಿಎಂಎ ಬಿಲ್ಡಿಂಗ್ 1ನೇ ಮಹಡಿ ಜೆ.ಸಿ.ರಸ್ತೆ, ತುಮಕೂರು ಟೌನ್.

**ಪ್ರಕಟಣೆ**

ಅರ್ಜಿದಾರರ ಪತಿ ಲೇಟ್ ರಮೇಶ ಎಂಬುವವರು 1ನೇ ಪ್ರತಿವಾದಿಯ ಲಾರಿ ಸಂ:ಎಪಿ–02–ಡಬ್ಲ್ಯೂ–7750 ಲಾರಿಯಲ್ಲಿ ಕ್ಲೀನರ್ ಆಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ: 08–05–2011ರಂದು 1.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.**
**ಸಂ:ಕಾಅತು:ಕಾಪಕಾ:ಸಿಆರ್:52/2011, ದಿನಾಂಕ:26–12–2011**

**ಅರ್ಜಿದಾರರು:**

1. ದ್ರಾಕ್ಷಾಯಣಮ್ಮ ಪತಿ: ಲೇಟ್ ಸಿದ್ದರಾಜು @ ಸಿದ್ದಯ್ಯ, ವಯಸ್ಸು 35 ವರ್ಷ
2. ಮನೋಜ ತಂದೆ:ಸಿದ್ದರಾಜು @ ಸಿದ್ದಯ್ಯ, ವಯಸ್ಸು 14 ವರ್ಷ
3. ಶಿಲ್ಪಾ ತಂದೆ:ಸಿದ್ದರಾಜು @ ಸಿದ್ದಯ್ಯ ವಯಸ್ಸು 11 ವರ್ಷ

**ವಿಳಾಸ:**
ಹೊನ್ನೇನಹಳ್ಳಿ ವಿಲೇಜ್, ಕಸಬಾ ಹೋಬಳಿ ತುಮಕೂರು ತಾಲ್ಲೂಕು.

**ಪ್ರತಿವಾದಿಗಳು:**

1) ನಾಗರಾಜ ತಂದೆ:ಪುಟ್ಟಯ್ಯ ವಯಸ್ಸು:50ವರ್ಷ
ವಿಳಾಸ: ಕುಪ್ಪೂರು ವಿಲೇಜ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು

2) ಗಂಗಣ್ಣ @ ಗಂಗಾಧರಯ್ಯ, ತಂದೆ:ಗಂಗಸಿದ್ದಯ್ಯ, ವಯಸ್ಸು 38ವರ್ಷ
ವಿಳಾಸ: ಹೊನ್ನೇನಹಳ್ಳಿ ವಿಲೇಜ್,ಶಿರಾ ಗೇಟ್
ಕಸಬಾ ಹೋಬಳಿ, ತುಮಕೂರು ತಾಲ್ಲೂಕು

3) ಅಬೀಬುಲ್ಲಾ@ಬಾಬು ತಂದೆ:ಅಬ್ದುಲ್ ಉಮರ್, ವಯಸ್ಸು 48 ವರ್ಷ
ವಾಸ:ಟೂಡಾ ಲೇಔಟ್, ಶಿರಾ ಗೇಟ್, ತುಮಕೂರು

**ಪ್ರಕಟಣೆ**

1ನೇ ಅರ್ಜಿದಾರರ ಪತಿ ಲೇಟ್ ಸಿದ್ದರಾಜು @ ಸಿದ್ದಯ್ಯ, ಎಂಬುವವರು ಪ್ರತಿವಾದಿಗಳ ಬ್ರಿಕ್ ಫ್ಯಾಕ್ಟ್ರಿಯಲ್ಲಿ ಕೂಲಿ ಕಾರ್ಮಿಕನಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:16–03–11 ರಂದು ಬೆಳಿಗ್ಗೆ 10.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 143**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ**
**"ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.**

**ಸಂ:ಕಾಅತು:ಕಾಪಕಾ:ಸಿಆರ್:59/2011, ದಿನಾಂಕ:31-12-2011**

**ಅರ್ಜಿದಾರರು:**

1) ಪದ್ದಮ್ಮ@ಪದ್ಮಾವತಿ ಜಿ.ಹೆಚ್ ಪತಿ: ರಂಗಪ್ಪ, ವಯಸ್ಸು 42 ವರ್ಷ
2) ಪುಷ್ಪಲತಾ ಸಿ.ಆರ್ ತಂದೆ:ರಂಗಪ್ಪ ವಯಸ್ಸು 18ವರ್ಷ

**ವಿಳಾಸ:**

ಚಿಕ್ಕಣ್ಣನಹಳ್ಳಿ ಗ್ರಾಮ, ಸಿ.ಎನ್.ದುರ್ಗ ಹೋಬಳಿ
ಕೊರಟಗೆರೆ ತಾಲ್ಲೂಕು

**ಪ್ರತಿವಾದಿಗಳು:**

1) ಶ್ರೀ ರಂಗಪ್ಪ ತಂದೆ:ಮರುಡಪ್ಪ, ಚಿಕ್ಕಣ್ಣನಹಳ್ಳಿ ಗ್ರಾಮ ಸಿ.ಎನ್.ದುರ್ಗ ಹೋಬಳಿ, ಕೊರಟಗೆರೆ ತಾಲ್ಲೂಕು
2) ದಿ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಷ್ಯೂರನ್ಸ ಕಂ.ಲಿ., ಬ್ರಾಂಚ್ ಆಫೀಸ್,1ನೇ ಮಹಡಿ, ಪಿ.ಬಿ.ನಂ.54, ಜಯದೇವ ಕಾಂಪ್ಲೆಕ್ಸ ಬಿ.ಹೆಚ್.ರಸ್ತೆ, ತುಮಕೂರು

**ಪ್ರಕಟಣೆ**

1ನೇ ಅರ್ಜಿದಾರರ ಮಗ ಲೇಟ್ ಪ್ರವೀಣಕುಮಾರ್ ಎಂಬುವವರು 1ನೇ ಪ್ರತಿವಾದಿಗಳ ಟ್ರ್ಯಾಕ್ಟರ್ ಟ್ರೈಲರಿನಲ್ಲಿ ಲೋಡರ್ ಅನ್‌ಲೋಡರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:01-04-2011 ರಂದು ಮಧ್ಯಾಹ್ನ 04.20ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ**
**"ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.**

**ಸಂ:ಕಾಅತು:ಕಾಪಕಾ:ಸಿಆರ್:60/2011, ದಿನಾಂಕ:31-12-2011**

**ಅರ್ಜಿದಾರರು:**

1) ಟಿ ಅಂಜಲಿ ಪತಿ: ಲೇಟ್ ಸುಬ್ರಮಣಿ @ ಸುಬ್ರಮಣ್ಯ, ವಯಸ್ಸು 42 ವರ್ಷ
2) ಕಲ್ಪನಾ ತಂದೆ: ಲೇಟ್ ಸುಬ್ರಮಣಿ @ ಸುಬ್ರಮಣ್ಯ, ವಯಸ್ಸು 23ವರ್ಷ
**ಖಾಯಂ ವಿಳಾಸ:** ನಂ.187, 3ನೇ ಬಿ ಕ್ರಾಸ್, ಪರಿಮಳನಗರ, ಬೆಂಗಳೂರು
**ಈಗಿನವಿಳಾಸ:** ಕೇರ್:ಆಫ್, ತೀರ್ಥಗಿರಿ ನಿಲಯ, ಸಪ್ತಗಿರಿ ಬಡಾವಣೆ, ಶಿರಾ ಟೌನ್, ತುಮಕೂರು ಜಿಲ್ಲೆ.

**ಪ್ರತಿವಾದಿಗಳು:**

1) ಕೌಸರುಲ್ಲಾ ಖಾನ್ ತಂದೆ:ಝಿಯಾವುಲ್ಲಾ ಖಾನ್ ವಯಸ್ಸು, 45ವರ್ಷ ವಿಳಾಸ: # 109 'ಎ' ಕ್ರಾಸ್, ಪೈಪ್‌ಲೈನ್ ರಸ್ತೆ, ಕರ್ನಾಟಕ ಬ್ಯಾಂಕ್ ಹತ್ತಿರ ಯಶವಂತಪುರ ಬೆಂಗಳೂರು.
2) ಐಸಿಐಸಿಐ ಲೊಂಬಾರ್ಡ ಜನರಲ್ ಇನ್ಷ್ಯೂರನ್ಸ ಕಂ.ಲಿ. ಪ್ರೆಸ್ಟೀಜ್ ಕಾರ್ನಿಕೆ, 62/1, 2ನೇ ಮಹಡಿ, ರಿಚ್‌ಮಂಡ್‌ರಸ್ತೆ, ಬೆಂಗಳೂರು-26.

**ಪ್ರಕಟಣೆ**

1ನೇ ಅರ್ಜಿದಾರರ ಪತಿ ಲೇಟ್ ಸುಬ್ರಮಣಿ @ ಸುಬ್ರಮಣ್ಯ, ಎಂಬುವವರು 1ನೇ ಪ್ರತಿವಾದಿಗಳ ಲಾರಿ ಸಂಖ್ಯೆ:ಕೆಎ–04–ಡಿ–11215 ಲಾರಿಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:01–12–2011 ರಂದು ಮಧ್ಯ ರಾತ್ರಿ 01.00ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 64**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ**

**"ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.**

**ಸಂ:ಕಾಅತು:ಕಾಪಕಾ:ಸಿಆರ್:01/2012, ದಿನಾಂಕ:10–01–2012**

**ಅರ್ಜಿದಾರರು:**

1) ಕಾಮಣ್ಣ ತಂದೆ: ಚಿಕ್ಕರಂಗಪ್ಪ, ವಯಸ್ಸು 55 ವರ್ಷ
2) ಗಿರಿಜಮ್ಮ ಪತಿ: ಕಾಮಣ್ಣ, ವಯಸ್ಸು 50 ವರ್ಷ

**ಈರ್ವರ ವಿಳಾಸ:**
ವೆಂಕಣ್ಣಹಳ್ಳಿ, ಬುಕ್ಕಾಪಟ್ಟಣ ಹೋಬಳಿ
ಕೊರಟಗೆರೆ ತಾಲ್ಲೂಕು

**ಪ್ರತಿವಾದಿಗಳು:**

1) ದೇವರಾಜು ಡಿ ತಂದೆ: ಲೇಟ್ ದೊಡ್ಡಯ್ಯ ಕೊಂತಿಹಳ್ಳಿ, ದೇವಲಾಪುರ ಪೋಸ್ಟ್, ಕೋರಾ ಹೋಬಳಿ, ತುಮಕೂರು ತಾಲ್ಲೂಕು ಮತ್ತು ಜಿಲ್ಲೆ
2) ದಿ ನ್ಯೂ ಇಂಡಿಯಾ ಅಷ್ಯೂರನ್ಸ ಕಂ.ಲಿ. 1ನೇ ಮಹಡಿ, ತುಮಕೂರು ಶಾಪಿಂಗ್ ಕಾಂಪ್ಲೆಕ್ಸ, ಬಿ.ಹೆಚ್.ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರ ಮಗ ಲೇಟ್ ರಾಜೇಂದ್ರ ತಂದೆ: ಕಾಮಣ್ಣ ಎಂಬುವವರು 1ನೇ ಪ್ರತಿವಾದಿಗಳ ಟ್ರ್ಯಾಕ್ಟರ್ ಟ್ರೈಲರ್ ಸಂಖ್ಯೆ: ಕೆಎ–06–ಬಿ–5520–5521 ಟ್ರ್ಯಾಕ್ಟರ್ ಟ್ರೈಲರಿನಲ್ಲಿ ಲೋಡರ್ ಅನ್ ಲೋಡರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:22–09–2011 ರಂದು ಬೆಳಿಗ್ಗೆ 8.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ

## "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:02/2012, ದಿನಾಂಕ:11-01-2012**

**ಅರ್ಜಿದಾರರು:**

1) ರಂಗಶಾಮಯ್ಯ ತಂದೆ: ದೊಡ್ಡಚಿಕ್ಕಣ್ಣ, ವಯಸ್ಸು 55ವರ್ಷ
2) ಶ್ರೀಮತಿ ಜಯಮ್ಮ ಪತಿ:ರಂಗಶಾಮಣ್ಣ, ವಯಸ್ಸು 52ವರ್ಷ
3) ಎನ್.ಶರತ್ ತಂದೆ:ಲೇಟ್ ನರಸಿಂಹ ಮೂರ್ತಿ, ವಯಸ್ಸು 18ವರ್ಷ

**ಈರ್ವರ ವಿಳಾಸ:**
ಹಾಲೇನಹಳ್ಳಿ ವಿಲೇಜ್, ಕಳ್ಳಂಬೆಳ್ಳ ಹೋಬಳಿ,ಶಿರಾ ತಾಲ್ಲೂಕು
ತುಮಕೂರು ಜಿಲ್ಲೆ.

**ಪ್ರತಿವಾದಿಗಳು:**

1) ಎ.ಎಸ್.ಉಮಾದೇವಿ ಪತಿ: ಕೆ.ಜಿ. ಓಮ್ಕಾರ್ ಮೂರ್ತಿ, ವಯಸ್ಸು 38ವರ್ಷ ಆಶೀರ್ವಾದ್ 6ನೇ ಮೇನ್, ಜಯನಗರ ಈಸ್ಟ್, ಶೆಟ್ಟಿಹಳ್ಳಿ ಮುಖ್ಯರಸ್ತೆ, ತುಮಕೂರು.
2) ಐಸಿಐಸಿಐ ಲೊಂಬಾರ್ಡ ಜನರಲ್ ಇನ್‌ಶ್ಯೂರನ್ಸ ಕಂ.ಲಿ. ರೀಜನಲ್ ಆಫೀಸ್ ನಂ.89, ಎಸ್.ಎ.ಆರ್.ಕಾಂಪ್ಲೆಕ್ಸ್, 2ನೇ ಮಹಡಿ, ಹೊಸೂರು ಮೇನ್ ರೋಡ, ಮಡಿವಾಳ, ಬೆಂಗಳೂರು-68.
3) ಶ್ರೀಮತಿ ಸಣ್ಣಮ್ಮ ಪತಿ:ಶಂಕರಪ್ಪ, ಪ್ರಾಪ್ತರು, ದುರ್ಗಮ್ಮ ಗುಡಿ ಬೀದಿ ಹತ್ತಿರ, ಕೇರ್/ಆಫ್, ನಂಜಪ್ಪ ಹೌಸ್, ಹುಳಿಯಾರ್, ಸಿ.ಎನ್.ಹಳ್ಳಿ ತಾಲ್ಲೂಕು

**ಪ್ರಕಟಣೆ**

ಅರ್ಜಿದಾರರ ಮಗ ಲೇಟ್ ನರಸಿಂಹಮೂರ್ತಿ ಎಂಬುವವರು 1ನೇ ಪ್ರತಿವಾದಿಗಳ ಟಾಟಾ ಇಂಡಿಕಾ ಕಾರ್ ಸಂಖ್ಯೆ:ಕೆಎ-06-ಎಮ್-6911 ಕಾರಿನಲ್ಲಿ ಚಾಲಕರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:17-04-2011 ರಂದು ಸಾಯಂಕಾಲ 5.45ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 65**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ

## "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:53/2011 ದಿನಾಂಕ:26-12-2011**

**ಅರ್ಜಿದಾರರು:**

1. ಜಯಮ್ಮ D/o ಲೇಟ್ ಸುಶೀಲಮ್ಮ ವಯಸ್ಸು 23 ವರ್ಷ
2. ಸಿದ್ದರಾಜು S/o ಲೇಟ್ ಸುಶೀಲಮ್ಮ ವಯಸ್ಸು 18 ವರ್ಷ

**ವಿಳಾಸ:**
ಹೊನ್ನೇನಹಳ್ಳಿ ವಿಲೇಜ್
ಕಸಬಾ ಹೋಬಳಿ ತುಮಕೂರು
ತಾಲ್ಲೂಕು.

**ಪ್ರತಿವಾದಿಗಳು:**

1) ನಾಗರಾಜ ತಂದೆ:ಪುಟ್ಟಯ್ಯ, ವಯಸ್ಸು:50ವರ್ಷ ವಿಳಾಸ: ಕುಪ್ಪೂರು ವಿಲೇಜ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು
2) ಗಂಗಣ್ಣ @ ಗಂಗಾಧರಯ್ಯ, ತಂದೆ:ಗಂಗಸಿದ್ದಯ್ಯ, ವಯಸ್ಸು 38ವರ್ಷ ವಿಳಾಸ:ಹೊನ್ನೇನಹಳ್ಳಿ ವಿಲೇಜ್,ಶಿರಾ ಗೇಟ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು
3) ಅಬೀಬುಲ್ಲಾ@ಬಾಬು ತಂದೆ:ಅಬ್ದುಲ್ ಉಮರ್, ವಯಸ್ಸು 48 ವರ್ಷ ವಾಸ: ಟೂಡಾ ಲೇಔಟ್, ಶಿರಾ ಗೇಟ್, ತುಮಕೂರು

**ಪ್ರಕಟಣೆ**

ಅರ್ಜಿದಾರರ ತಾಯಿ ಲೇಟ್ ಸುಶೀಲಮ್ಮ, ಎಂಬುವವರು ಪ್ರತಿವಾದಿಗಳ ಬ್ರಿಕ್ ಫ್ಯಾಕ್ಟ್ರಿಯಲ್ಲಿ ಕೂಲಿ ಕಾರ್ಮಿಕಳಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:16–03–11 ರಂದು ಬೆಳಿಗ್ಗೆ 10.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ**

**"ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.**

**ಸಂ:ಕಾಅತು:ಕಾಪಕಾ:ಸಿಆರ್:54/2011, ದಿನಾಂಕ:26–12–2011**

**ಅರ್ಜಿದಾರರು:**

1. ಕುಂಬಿನಗರಸಯ್ಯ S/o ಲೇಟ್ ಚಿಕ್ಕಣ್ಣ, ವಯಸ್ಸು 54 ವರ್ಷ
2. ಹನುಮಂತಮ್ಮ W/o ಕುಂಬಿನರಸಯ್ಯ ವಯಸ್ಸು 50 ವರ್ಷ

**ವಿಳಾಸ:**
ನರಸಾಪುರ ವಿಲೇಜ್
ಕಸಬಾ ಹೋಬಳಿ ತುಮಕೂರು ತಾಲ್ಲೂಕು.

**ಪ್ರತಿವಾದಿಗಳು:**

1) ನಾಗರಾಜ ತಂದೆ:ಪುಟ್ಟಯ್ಯ, ವಯಸ್ಸು:50ವರ್ಷ
ವಿಳಾಸ: ಕುಪ್ಪೂರು ವಿಲೇಜ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು
2) ಗಂಗಣ್ಣ @ ಗಂಗಾಧರಯ್ಯ, ತಂದೆ:ಗಂಗಸಿದ್ದಯ್ಯ, ವಯಸ್ಸು 38ವರ್ಷ
ವಿಳಾಸ:ಹೊನ್ನೇನಹಳ್ಳಿ ವಿಲೇಜ್,ಶಿರಾ ಗೇಟ್ ಕಸಬಾ ಹೋಬಳಿ, ತುಮಕೂರು ತಾಲ್ಲೂಕು
3) ಅಬೀಬುಲ್ಲಾ@ಬಾಬು ತಂದೆ:ಅಬ್ದುಲ್ ಉಮರ್, ವಯಸ್ಸು 48 ವರ್ಷ
ವಾಸ:ಟೂಡಾ ಲೇಔಟ್, ಶಿರಾ ಗೇಟ್, ತುಮಕೂರು

**ಪ್ರಕಟಣೆ**

ಅರ್ಜಿದಾರರ ಮಗಳಾದ ಲೇಟ್ ಭಾಗ್ಯಮ್ಮ, ಎಂಬುವವರು ಪ್ರತಿವಾದಿಗಳ ಬ್ರಿಕ್ ಫ್ಯಾಕ್ಟ್ರಿಯಲ್ಲಿ ಕೂಲಿ ಕಾರ್ಮಿಕಳಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ: 16–03–11 ರಂದು ಬೆಳಿಗ್ಗೆ 10.30ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 144**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ

## "ಕಂದಾಯ ಭವನ"ತುಮಕೂರು ಜಿಲ್ಲೆ, ತುಮಕೂರು.

**ಸಂ:ಕಾಅತು:ಕಾಪಕಾ:ಸಿಆರ್:05/2012, ದಿನಾಂಕ:24-01-2012**

**ಅರ್ಜಿದಾರರು:**

1) ಸುಜಾತಾ ಪತಿ: ಲೇಟ್ ರಮೇಶ್ ವಯಸ್ಸು 37ವರ್ಷ
2) ದಿವ್ಯಶ್ರೀ ತಂದೆ: ಲೇಟ್ ರಮೇಶ್ ವಯಸ್ಸು 18ವರ್ಷ
3) ಮರಿಸಿದ್ದಪ್ಪ ತಂದೆ:ಲೇಟ್ ಸಿದ್ದರಾಮಯ್ಯ, ವಯಸ್ಸು 70ವರ್ಷ

**ಈರ್ವರ ವಿಳಾಸ:**

ನಂ.115, ಭೀಮಸಂದ್ರ, ಜನತಾ ಕಾಲೋನಿ, ತುಮಕೂರು ತಾಲ್ಲೂಕು

**ಪ್ರತಿವಾದಿಗಳು:**

1) ಚಿಕ್ಕಮೊಗೆ ಗೌಡ, ನಂ.69/02, ಕುದರಗುಂಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.
2) ಶ್ರೀರಾಮ ಜನರಲ್ ಇನ್‌ಷ್ಯೂರನ್ಸ ಕಂ.ಲಿ. 110003-ಇ 8, ರೀಕೋ ಇಂಡಸ್ಟ್ರಿಯಲ್ ಏರಿಯಾ ಜೈಪುರ, ರಾಜಸ್ಥಾನ್ ರಾಜ್ಯ

**ಪ್ರಕಟಣೆ**

ಅರ್ಜಿದಾರರ ಮಗ ಮೃತ ರಮೇಶ್ ತಂದೆ: ಮರಿಸಿದ್ದಪ್ಪ ಎಂಬುವವರು 1ನೇ ಪ್ರತಿವಾದಿಗಳ ಟ್ರ್ಯಾಕ್ಟರ್ ಟ್ರೈಲರ್ ಸಂಖ್ಯೆ:ಕೆಎ-11-ಟಿ-8455-56 ಟ್ರ್ಯಾಕ್ಟರ್ ಟ್ರೈಲರಿನಲ್ಲಿ ಚಾಲಕರಾಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಕರ್ತವ್ಯದ ವೇಳೆಯಲ್ಲಿ ದಿನಾಂಕ:26-05-2011 ರಂದು ಮಧ್ಯಾಹ್ನ 12.00ಗಂಟೆಗೆ ಆದ ಅಪಘಾತದಲ್ಲಿ ಮೃತಪಟ್ಟಿರುತ್ತಾರೆಂದು ತಿಳಿಸಿ ಈ ನ್ಯಾಯಾಲಯಕ್ಕೆ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎ.ಪಿ.ಪುಂಡಲೀಕರಾವ್,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ತುಮಕೂರು ಜಿಲ್ಲೆ ತುಮಕೂರು

**ಪಿ.ಆರ್. 179**

## ಕಂದಾಯ ಇಲಾಖೆ

## ಮಾಹಿತಿ ಹಕ್ಕು ಅಧಿನಿಯಮ 2005

## ಬೆಳ್ತಂಗಡಿ ತಹಶೀಲ್ದಾರ್ ರವರ ಕಛೇರಿ, ಬೆಳ್ತಂಗಡಿ

## ಅಧಿಸೂಚನೆ (ಪರಿಷ್ಕೃತ)

**ವಿಷಯ :-** ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 ರ ಪ್ರಕರಣ ಕಲಂ 4(1)(ಬಿ) ಅನುಸಾರ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಕಛೇರಿಯ ಮಾಹಿತಿಯನ್ನು ಪ್ರಕಟಿಸುವ ಬಗ್ಗೆ.

ಭಾರತ ಸರ್ಕಾರವು ಜಾರಿಗೆ ತಂದಿರುವ 2005 ರ ಮಾಹಿತಿ ಹಕ್ಕು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಹಕ್ಕು ಅಧಿನಿಯಮ 2005 ರ(ಸೆಂಟ್ರಲ್ ಕಾಯ್ದೆ 22-2005) ರ ಸೆಕ್ಷನ್ 5(1) 5(2) ಮತ್ತು 19(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಂದಾಯ ಇಲಾಖೆಗೆ ಸೇರಿದ ತಹಶೀಲ್ದಾರವರ ಕಛೇರಿ ವ್ಯಾಪ್ತಿಯ ಮಾಹಿತಿಯನ್ನು ಕೊಡುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಈ ಕೆಳ ಕಂಡಂತೆ ಸರಕಾರದಿಂದ ನೇಮಿಸಲಾಗಿದೆ.

| ಕ್ರ. ಸಂ. | ಇಲಾಖೆಯ ಹೆಸರು | ಮಾಹಿತಿ ಹಕ್ಕು ಪಡೆಯುವ ಹಕ್ಕು ಕಾಯ್ದೆ 2005 ರ ಸೆಕ್ಷನ್ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಪಡೆಯುವ ಹಕ್ಕು ಕಾಯ್ದೆ 2005 ರ ಸೆಕ್ಷನ್ 5(2) ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಪಡೆಯುವ ಕಾಯ್ದೆ 2005 ರ ಸೆಕ್ಷನ್ 19(1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1 | 2 | 3 | 4 | 5 |
| 1 | ತಾಲೂಕು ಕಛೇರಿ ಬೆಳ್ತಂಗಡಿ (ಕಂದಾಯ ಇಲಾಖೆ) | ಶ್ರೀಮತಿ ಎಸ್. ಕುಸುಮಕುಮಾರಿ ಕ.ಆ.ಸೇ.,ತಹಶೀಲ್ದಾರರು, ಬೆಳ್ತಂಗಡಿ | ಶ್ರೀರಾಜು (ಪ್ರಭಾರ)ಕೇಂದ್ರಸ್ಥಾನೀಯ ಶಿರಸ್ತೇದಾರರು, ತಾಲೂಕು ಕಛೇರಿ, ಬೆಳ್ತಂಗಡಿ | ಶ್ರೀ ಸುಂದರ ಭಟ್ ಉಪವಿಭಾಗಾಧಿಕಾರಿ, ಪುತ್ತೂರು ಉಪವಿಭಾಗ, ಪುತ್ತೂರು |

| ಕ್ರ. ಸಂ. | ಇಲಾಖೆಯ ಹೆಸರು | ಮಾಹಿತಿ ಹಕ್ಕು ಪಡೆಯುವ ಹಕ್ಕು ಕಾಯ್ದೆ 2005 ರ ಸೆಕ್ಷನ್ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಪಡೆಯುವ ಹಕ್ಕು ಕಾಯ್ದೆ 2005 ರ ಸೆಕ್ಷನ್ 5(2) ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಹಕ್ಕು ಪಡೆಯುವ ಕಾಯ್ದೆ 2005 ರ ಸೆಕ್ಷನ್ 19(1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 2 | ನಾಡಕಛೇರಿ, ಕೊಕ್ಕಡ | ಉಪತಹಶೀಲ್ದಾರರು, ನಾಡಕಛೇರಿ, ಬೆಳ್ತಂಗಡಿ | ನಾಡಕಛೇರಿಯ ಗುಮಾಸ್ತರು | ತಹಶೀಲ್ದಾರರು, ಬೆಳ್ತಂಗಡಿ ತಾಲೂಕು |
| 3 | ನಾಡಕಛೇರಿ, ವೇಣೂರು | ಉಪತಹಶೀಲ್ದಾರರು, ನಾಡಕಛೇರಿ, ವೇಣೂರು | ನಾಡಕಛೇರಿಯ ಗುಮಾಸ್ತರು | ತಹಶೀಲ್ದಾರರು, ಬೆಳ್ತಂಗಡಿ ತಾಲೂಕು |

**I) 4(1)(ಬಿ) 1) ಕಛೇರಿ ವ್ಯವಸ್ಥೆ ಮತ್ತು ಅದರ ಕಾರ್ಯ ಚಟುವಟಿಕೆಗಳು ಮತ್ತು ಜವಾಬ್ದಾರಿಗಳು**

**ಬೆಳ್ತಂಗಡಿ ತಾಲೂಕು ಘಟಕ ಅಧಿಕಾರಿಗಳು ಮತ್ತು ನೌಕರ ಅಧಿಕಾರಿಗಳು**

**ತಹಶೀಲ್ದಾರರು**

| | | |
|---|---|---|
| ಕೇಂದ್ರಸ್ಥಾನ ಶಿರಸ್ತೇದಾರರು | ಭೂಮಿ ಶಿರಸ್ತೇದಾರರು | ಚುನಾವಣೆ ಶಾಖೆ ಶಿರಸ್ತೇದಾರರು |
| ಪ್ರಥಮ ದರ್ಜೆ ಸಹಾಯಕರು | ಪ್ರಥಮ ದರ್ಜೆ ಸಹಾಯಕರು | ಪ್ರಥಮ ದರ್ಜೆ ಸಹಾಯಕರು |
| ದ್ವಿತೀಯ ದರ್ಜೆಸಹಾಯಕರು | ದ್ವಿತಿಯ ದರ್ಜೆ ಸಹಾಯಕರು | ದ್ವಿತಿಯ ದರ್ಜೆ ಸಹಾಯಕರ |
| ಡಿ ದರ್ಜೆ | ಡಿ ದರ್ಜೆ | ಡಿ ದರ್ಜೆ |

**ಬೆಳ್ತಂಗಡಿ ತಾಲೂಕು ಕಾರ್ಯನಿರ್ವಾಹಕ ಘಟಕ ಅಧಿಕಾರಿಗಳು(ನೌಕರ ಅಧಿಕಾರಿಗಳು)**

**ತಹಶೀಲ್ದಾರರು**

| | | |
|---|---|---|
| ಉಪತಹಶೀಲ್ದಾರರು, ನಾಡಕಛೇರಿ ವೇಣೂರು | ಕಂದಾಯ ನಿರೀಕ್ಷಕರು, ಬೆಳ್ತಂಗಡಿ | ಉಪತಹಶೀಲ್ದಾರರು, ನಾಡಕಛೇರಿ, ಕೊಕ್ಕಡ |
| ಕಂದಾಯನಿರೀಕ್ಷಕರು, ವೇಣೂರು | ಗ್ರಾಮಕರಣಿಕರು | ಕಂದಾಯ ನಿರೀಕ್ಷಕರು, ಕೊಕ್ಕಡ |
| ಗ್ರಾಮಕರಣಿಕರು | | ಗ್ರಾಮಕರಣಿಕರು |

**1. ಬೆಳ್ತಂಗಡಿ ತಾಲೂಕಿನ ಸಾಮಾನ್ಯ ಮಾಹಿತಿ**

| ಕ್ರ.ಸಂ | ಹೋಬಳಿಗಳು | ಗ್ರಾಮಗಳು |
|---|---|---|
| 1 | ಬೆಳ್ತಂಗಡಿ | 25 |
| 2 | ವೇಣೂರು | 29 |
| 3 | ಕೊಕ್ಕಡ | 27 |
| | **ಪಂಚಾಯತ್‌ಗಳ ವಿವರ** | |
| 1 | ಗ್ರಾಮಪಂಚಾಯತ್‌ಗಳು | 43 |
| 2 | ನಗರ ಪಂಚಾಯತ್ | 01 |
| 3 | ಜಿಲ್ಲಾ ಪಂಚಾಯತ್ ಕ್ಷೇತ್ರಗಳು | 6 |
| 4 | ತಾಲೂಕು ಪಂಚಾಯತ್ ಕ್ಷೇತ್ರಗಳು | 24 |
| 5 | ಗ್ರಾಮಲೆಕ್ಕಿಗರ ವೃತ್ತಗಳು | 43 |
| | **ತಾಲೂಕಿನ ಸರಾಸರಿ ಮಳೆ ವಿವರ** | |
| 1 | ವಾಡಿಕೆ ಮಳೆ | 4589.0 ಮಿ.ಮೀ. |
| 2 | 2009ನೇ ಸಾಲಿಗೆ ಆದ ಮಳೆ | 4727.2 ಮಿ.ಮೀ. |
| 3 | 27–10–2010 ಕ್ಕೆ | 4222.3 ಮಿ.ಮೀ. |
| 4 | ಮಳೆಮಾಪನ ಕೇಂದ್ರಗಳು | 7 |
| 5 | ತಾಲೂಕಿನಲ್ಲಿರುವ ಮುಜರಾಯಿ ಸಂಸ್ಥೆಗಳು | 50 |

| ಕ್ರ.ಸಂ | ಹೋಬಳಿಗಳು | ಗ್ರಾಮಗಳು |
|---|---|---|
| | **ಜನಸಂಖ್ಯೆ ವಿವರ** | |
| 1 | 2001ನೇ ಸಾಲಿನ ಜನಗಣತಿಯಂತೆ | 2,46,494 |
| 2 | ಗಂಡಸರು | 1,21,288 |
| 3 | ಹೆಂಗಸರು | 1,25,206 |
| 4 | 2010 ರ ಜನಗಣತಿಯಂತೆ ಅಂದಾಜು | 2,73,199 |
| | **ಭೌಗೋಳಿಕ ವಿಸ್ತೀರ್ಣ** | |
| 1 | ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣ | 1,87,510 ಹೆಕ್ಟೇರ್ |
| 2 | ಅರಣ್ಯ | 19,887 ಹೆಕ್ಟೇರ್ |
| 3 | ಖಾಯಂ ಗೋಮಾಳ | 4,053 ಹೆಕ್ಟೇರ್ |
| | **ಚುನಾವಣೆ** | |
| 1 | ಒಟ್ಟು ಮತಗಟ್ಟೆಗಳು | 185 |
| 2 | ಒಟ್ಟು ಮತದಾರರು | 181248 |
| 3 | ಗಂಡಸರು | 91878 |
| 4 | ಹೆಂಗಸರು | 89370 |
| | **ತಾಲೂಕುವಾರು ಮಂಜೂರಾದ ವಿವಿಧ ವೇತನಗಳು** | |
| 1 | ವೃದ್ಧಾಪ್ಯ ವೇತನ | 870 |
| 2 | ಅಂಗವಿಕಲ ವೇತನ | 2463 |
| 3 | ವಿಧವಾ ವೇತನ | 352 |
| 4 | ಸಂಧ್ಯಾ ಸುರಕ್ಷಾ | 2216 |
| | **ಪ್ರಾಕೃತಿಕ ವಿಕೋಪದಡಿ ಖರ್ಚಾದ ವಿವರ** | |
| 1 | 2010–11 ನೇ ಸಾಲಿಗೆ | 248450 |
| 2 | ಲಭ್ಯವಿರುವ ಅನುದಾನ | 1124211 |
| | **ನ್ಯಾಯಬೆಲೆ ಅಂಗಡಿಗಳ ಸಂಖ್ಯೆ** | |
| 1 | ಒಟ್ಟು ನ್ಯಾಯಬೆಲೆ ಅಂಗಡಿಗಳು | 69 |
| | **ಬೆಳ್ತಂಗಡಿ ನಗರ ಪಡಿತರ ಚೀಟಿಯ ವಿವರ** | |
| 1 | ಅಂತ್ಯೋದಯ | 73 |
| 2 | ಅಕ್ಷಯ | 557 |
| 3 | ಎಪಿಎಲ್ | 933 |
| | **ಗ್ರಾಮಾಂತರ ಪಡಿತರ ಚೀಟಿಯ ವಿವರ** | |
| 1 | ಅಂತ್ಯೋದಯ | 2995 |
| 2 | ಅಕ್ಷಯ | 23791 |
| 3 | ಎಪಿ ಎಲ್ | 23682 |
| | ಒಟ್ಟು | 50468 |

**II) ಕಾರ್ಯಚಟುವಟಿಕೆಗಳು ಮತ್ತು ಜವಾಬ್ದಾರಿಗಳು**

ತಹಶೀಲ್ದಾರ್ ರವರು ತಾಲೂಕಿನಲ್ಲಿ ತಾಲೂಕು ಕಛೇರಿ ವ್ಯವಸ್ಥೆಯ ಮುಖ್ಯಸ್ಥರಾಗಿದ್ದು ತಾಲೂಕು ಘಟಕದ ಆಡಳಿತ ಹಾಗೂ ಕಾನೂನು ಸುವ್ಯವಸ್ಥೆ ಬಗ್ಗೆ ಸಂಪೂರ್ಣ ಅಧಿಕಾರವುಳ್ಳವರಾಗಿದ್ದಾರೆ. ಕರ್ನಾಟಕ ಭೂ ಕಂದಾಯ ಅಧಿನಿಯಮ ಕಲಂ ರಂತೆ ತಾಲೂಕಿಗೆ ಒಬ್ಬೊಬ್ಬರನ್ನು ತಹಶೀಲ್ದಾರ್

ರವರು ಸರ್ಕಾರದಿಂದ ನೇಮಿಸಲ್ಪಟ್ಟಿರುತ್ತದೆ. ಸರ್ಕಾರಕ್ಕೆ ಅಧೀನರಾಗಿದ್ದು ಭೂ ಕಂದಾಯ ಮತ್ತು ಇತರೆ ಅಧಿನಿಯಮಗಳಲ್ಲಿ ನಿಯಮಿತವಾದ ಎಲ್ಲಾ ಅಧಿಕಾರಿಗಳನ್ನು ಮತ್ತು ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ. ತಹಶೀಲ್ದಾರ್ ರವರು ತಾಲೂಕು ಆಡಳಿತಾಧಿಕಾರಿಯಾಗಿ ಸಹ ಕಾರ್ಯ ನಿರ್ವಹಿಸುತ್ತಿದ್ದಾರೆ.

**ಕಂದಾಯ ಇಲಾಖೆಯು ಕೆಳಕಂಡ ಸಾಮಾನ್ಯ ಕಾರ್ಯಗಳನ್ನು ಪ್ರಮುಖವಾಗಿ ನಿರ್ವಹಿಸುತ್ತದೆ.**

1) ಕಾರ್ಯಕಾರಿ ದಂಡನಾಧಿಕಾರಿಯ ಕಾರ್ಯ ನಿರ್ವಹಣೆ
2) ಸರ್ಕಾರಕ್ಕೆ ಸಂಬಂಧಿಸಿದಂತೆ ಎಲ್ಲಾ ರೀತಿಯ ಸಾರ್ವಜನಿಕ ದೂರು ನಿರ್ವಹಣೆ
3) ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಸಾರ್ವಜನಿಕ ವಿತರಣಾ ವ್ಯವಸ್ಥೆಯ ನಿರ್ವಹಣೆ
4) ಎಲ್ಲಾ ರೀತಿಯ ಚುನಾವಣೆಗಳನ್ನು ನಡೆಸುವುದು.
5) ಎಲ್ಲ ರೀತಿಯ ಗಣತಿ ಕಾರ್ಯವನ್ನು ನಡೆಸುವುದು (ಜನಗಣತಿ ಜಾನುವರು ಗಣತಿ, ಕೃಷಿ ಗಣತಿ, ಆರ್ಥಿಕ ಗಣತಿ)
6) ಎಲ್ಲಾ ಔಪಚಾರಿಕ ಸಮಾರಂಭಗಳಲ್ಲಿ ರಾಜ್ಯದ ಪರವಾಗಿ ಶಿಷ್ಟಾಚಾರ ಕಾರ್ಯ ನಿರ್ವಹಿಸುವುದು.
7) ಪ್ರಕೃತಿ ವಿಕೋಪ ನಿರ್ವಹಣೆ , ನೈಸರ್ಗಿಕ ಮತ್ತು ಮಾನವ ನಿರ್ಮಿತ ವಿಕೋಪಗಳಿಂದ ಬಾಧಿತರಾದವರಿಗೆ ಪರಿಹಾರ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾರ್ಯ ನಿರ್ವಹಣೆ,
8) ಯೋಜನಾ ಸಂತ್ರಸ್ತ ಮತ್ತು ಬಾಧಿತ ಕುಟುಂಬಗಳಿಗೆ ಪುನರ್ ವಸತಿ ಮತ್ತು ಪುನರ್ ನಿರ್ಮಾಣ ನಿರ್ವಹಣೆ.
9) ವೃದ್ದಾಪ್ಯ ವೇತನ ಮತ್ತಿತರ ಸಾಮಜಿಕ ಭದ್ರತಾ ಯೋಜನೆಗಳನ್ನು ನಿರ್ವಹಿಸುವುದು. ಆಮ್ ಆದ್ಮಿ ಯೋಜನೆ.
10) ಆಯುಧ ಕಾಯಿದೆಯಡಿ ಪ್ರಕರಣಗಳ ವಿಲೇವಾರಿ
11) ಆದಾಯ ಜಾತಿ, ಧರ್ಮ, ನಿವಾಸ, ರಾಷ್ಟ್ರೀಯತೆ ಅಲ್ಪ ಸಂಖ್ಯಾತರ ಸ್ಥಾನಮಾನಗಳ ಬಗ್ಗೆ ಪ್ರಮಾಣ ಪತ್ರ ನೀಡುವುದು.
12) ಪೌರಾಡಳಿತ
13) ಗುಪ್ತ ನಿಧಿ
14) ಮೋಟಾರು ವಾಹನಗಳ ಅಧಿನಿಯಮದಡಿಯಲ್ಲಿ ಸಾರಿಗೆ ವಿಷಯಗಳ ನಿರ್ವಹಣೆ (ಆರ್ ಟಿ ಎ ಎಸ್ ಮಾತ್ರ)
15) ನ್ಯಾಯಾಲಯಗಳಲ್ಲಿ ಸರ್ಕಾರಿ ವ್ಯಾಜ್ಯ ನಿರ್ವಹಣೆ
16) ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವಿಧ ಯೋಜನೆಗಳ ಮತ್ತು ಕಾರ್ಯಕ್ರಮಗಳ ಸಮನ್ವಯ ಹಾಗೂ ಪರಿವೀಕ್ಷಣಾ ಕಾರ್ಯ ನಿರ್ವಹಣೆ.
17) ಸರ್ಕಾರ ಕಾಲಕಾಲಕ್ಕೆ ಜಾರಿಗೆ ತರುವ ಯೋಜನೆಗಳ ನಿರ್ವಹಣೆ ಪತ್ರಿಕಾ ಕಾಯ್ದೆಯಡಿ ನಿರ್ವಹಣೆ
18) ಮನರಂಜನಾ ಕಾಯ್ದೆಯಡಿ ನಿರ್ವಹಣೆ

**ಈ) ಕಂದಾಯ ಆಡಳಿತ:–** ಆದಾಗ್ಯೂ ಕಂದಾಯ ಮತ್ತಿತರ ಕಾನೂನುಗಳಲ್ಲಿ ಸಾಂಪ್ರದಾಯಿಕವಾಗಿ ಕಂದಾಯ ಇಲಾಖೆಗೆ ವಹಿಸಲಾಗಿರುವ ಪ್ರಮುಖ ಕಾರ್ಯಗಳು ಕೆಳಕಂಡಂತಿವೆ.

1) ರಾಜ್ಯದಲ್ಲಿನ ಭೂ ದಾಖಲೆಗಳ ನಿರ್ವಹಣೆ ಮತ್ತು ಎಲ್ಲಾ ಜಮೀನುಗಳ ಭೂ ಮಾಪನ.
2) ಸರಕಾರಿ ಬಾಕಿ ವಸೂಲಾತಿ ಭೂ ಕಂದಾಯ ನೀರು ತೆರಿಗೆ, ಮತ್ತಿತರ ಸರ್ಕಾರಿ ಬಾಕಿ ಉಪಕರ ಮತ್ತು ತೆರಿಗೆಗಳ ವಸೂಲಾತಿ.
3) ಗೋಮಾಳ ಕೆರೆ ಅಂಗಳ, ಉಪವನಗಳ ಇತ್ಯಾದಿ ಸಮುದಯಿಕ ಜಮೀನುಗಳು ನಿರ್ದಿಷ್ಟ ಉದ್ದೇಶಕ್ಕಾಗಿ ಕಾದಿರಿಸಿದ ಜಮೀನುಗಳು ಸೇರಿದಂತೆ ಎಲ್ಲಾ ಸರ್ಕಾರಿ ಜಮೀನುಗಳ ನಿರ್ವಹಣೆ
4) ಭೂ ಮಂಜೂರಾತಿ
5) ಭೂ ಸುಧಾರಣೆ ಮತ್ತು ಗೇಣಿದಾರಿಕೆಯ ನಿಬಂಧನೆಗಳ ನಿರ್ವಹಣೆ.
6) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಜಮೀನು ವಿಚಾರ
7) ಭೂ ಪರಿವರ್ತನೆ
8) ಬಾಡಿಗೆ ನಿಯಂತ್ರಣ
9) ಸಾರ್ವಜನಿಕ ಉದ್ದೇಶಕ್ಕಾಗಿ ಖಾಸಗಿ ಆಸ್ತಿಗಳನ್ನು ಸ್ವಾಧೀನ ಪಡಿಸುವುದು.
10) ಕರ್ನಾಟಕ ಭೂ ಕಂದಾಯ ಕಾಯ್ದೆಯಡಿ ಬರುವ ಎಲ್ಲಾ ವ್ಯವಹಾರಗಳ ನಿರ್ವಹಣೆ

**ತಾಲೂಕು ಮಟ್ಟದಲ್ಲಿ ತಹಶೀಲ್ದಾರರು ಹೊಂದಿರುವ ಅಧಿಕಾರದ ಮುಖ್ಯ ಕಾಯ್ದೆಗಳು ಮತ್ತು ಕಾನೂನುಗಳ ವಿವರ.**

1) ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ಮತ್ತು ನಿಯಮಾವಳಿ 1974.
2) ಕರ್ನಾಟಕ ಹಲವು ಇನಾಂ ರದ್ಧತಿ ಅಧಿನಿಯಮ 1977
3) ಕರ್ನಾಟಕ ಗ್ರಾಮ ನೌಕರಿಗಳ ರದ್ಧತಿ ಅಧಿನಿಯಮ 1961
4) ಕರ್ನಾಟಕ ಪುರಸಭೆಗಳ ಅಧಿನಿಯಮ

5) ಕರ್ನಾಟಕ ಕೃಷಿ ಸಾಲ ಕಾರ್ಯಾಚರಣೆ ಮತ್ತು ಇತರ ಉಪಬಂಧಗಳ ಅಧಿನಿಯಮ 1974 ಮತ್ತು ನಿಯಮಾವಳಿ 1975.
6) ಕರ್ನಾಟಕ ವೃದ್ಧಾಪ್ಯ ವೇತನ ನಿಯಮಾವಳಿ.
7) ನಿರ್ಗತಿಕ ವಿಧವಾ ವೇತನ ನಿಯಮಾವಳಿ
8) ದೈಹಿಕ ಅಂಗವಿಕಲರಿಗೆ ನಿರ್ವಹಣಾ ಭತ್ಯ ಮಂಜೂರು ನಿಯಮಾವಳಿ
9) ಕರ್ನಾಟಕ ಋಣ ವಿಮೋಚನಾ ಅಧಿನಿಯಮ
10) ಮತದಾರರ ನೋಂದಣಿ ನಿಯಮಾವಳಿ
11) ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಅಧಿನಿಯಮ 1966
12) ಕರ್ನಾಟಕ ನೀರಾವರಿ ಅಧಿನಿಯಮ 1965
13) ಕರ್ನಾಟಕ ನೀರಾವರಿ(ನೀರಿನ ಕರ ಆಕರಣೆ) ನಿಯಮಾವಳಿ 1965
14) ಕರ್ನಾಟಕ ಅರಣ್ಯ ನಿಯಮಾವಳಿ 1969.
15) ಕರ್ನಾಟಕ ಜಾನುವಾರು ಅತಿಕ್ರಮ ಪ್ರವೇಶ ಅಧಿನಿಯಮ 1966
16) ಏಲಕ್ಕಿ ಅಧಿನಿಯಮ 1965
17) ಕರ್ನಾಟಕ ಸಾರ್ವಜನಿಕ ಆವರಣಗಳ ಅಧಿನಿಯಮ 1974 ಮತ್ತು ಅದರಡಿಯ ನಿಯಮಾವಳಿ.

**ದಂಡನಾಧಿಕಾರಿಯಾಗಿ ತಹಶೀಲ್ದಾರರು ಈ ಕೆಳಗಿನ ಕಾಯ್ದೆಗಳಡಿಯಲ್ಲಿ ಅಧಿಕಾರ ಹಾಗೂ ಕರ್ತವ್ಯಗಳನ್ನು ಹೊಂದಿರುತ್ತಾರೆ.**

1) ದಂಡ ಪ್ರಕ್ರಿಯೆ ಸಂಹಿತೆ 1974.
2) ಭಾರತ ಸಾಕ್ಯ ಅಧಿನಿಯಮ 1963
3) ಕರ್ನಾಟಕ ಪೊಲೀಸ್ ಅಧಿನಿಯಮ 1963
4) ಜೀತದಾಳು ಪದ್ಧತಿ(ನಿರ್ಮೂಲನಾ) ಅಧಿನಿಯಮ 1976
5) ಪ್ರಮಾಣ ವಚನ ಅಧಿನಿಯಮ 1999
6) ಭಾರತೀಯ ಮುದ್ರಾಂಕ ಅಧಿನಿಯಮ 1899
7) ಪ್ರಾಣಿಗಳಿಗೆ ಹಿಂಸೆ ಅಧಿನಿಯಮ 1960
8) ಕರ್ನಾಟಕ ಭಿಕ್ಷಾಟನಾ ಅಧಿನಿಯಮ 1975
9) ಸಾರ್ವಜನಿಕ ಆರೋಗ್ಯ ಅಧಿನಿಯಮ 1944
10) ಕರ್ನಾಟಕ ಮಾರಾಟಕರ ಅಧಿನಿಯಮ 1957
11) ಸತಿ ಹೋಗುವ(ನಿಷೇಧ)ಅಧಿನಿಯಮ 1987
12) ಕರ್ನಾಟಕ ಆಹಾರ ಮತ್ತು ನಾಗರಿಕ ಪೂರೈಕೆ ಅಧಿನಿಯಮ
13) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ(ದೌರ್ಜನ್ಯ ನಿಷೇಧ) ಅಧಿನಿಯಮ 1989
14) ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನಗಳ ಜೀರ್ಣೋದ್ಧಾರ ಆಡಳಿತ ನಿರ್ವಹಣೆ.

**ಕಾಗದ ಪತ್ರಗಳ ಸ್ವೀಕೃತಿ–ವಿಲೇವಾರಿ**

ಸಾರ್ವಜನಿಕರಿಂದ, ಅಧೀನ ಕಛೇರಿಗಳಿಂದ ಮತ್ತು ಸರ್ಕಾರ ಹಾಗೂ ಮೇಲಾಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು/ಕಡತಗಳನ್ನು ಸಾಮಾನ್ಯ ಸ್ವೀಕೃತಿ ಸಾರ್ವಜನಿಕರ ಮನವಿ ಬಗ್ಗೆ ಸ್ಥಳದಲ್ಲೇ ಸ್ವೀಕೃತಿ ಪತ್ರವನ್ನು ನೀಡಿದ ನಂತರ ಕಛೇರಿ ಸಹಾಯಕರು ಕೇಂದ್ರ ಸ್ಥಾನಿಕ ಸಹಾಯಕರ ಮುಖಾಂತರ ತಹಶೀಲ್ದಾರರ ಗಮನಕ್ಕೆ ಸ್ವೀಕೃತಿ ಶಾಖೆಯಲ್ಲಿ ದಾಖಲಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಪ್ರತಿ ಕಡತ/ಕಾಗದ ಪತ್ರಗಳನ್ನು ಶಾಖೆವಾರು ಗುರುತಿಸುವಂತೆ ಟ್ರಿ ಲೆಟರ್ ಇಂಡೆಕ್ಸ್ ಹಾಕಿದ ನಂತರ ಅಗತ್ಯ ಕ್ರಮ ಕೈಗೊಳ್ಳಲು ನೀಡಲಾಗುತ್ತದೆ. ಉದಾಹರಣೆಗೆ

1) ಭೂ ಮಂಜೂರಾತಿ (ಎಲ್ ಎನ್ ಡಿ)
2) ಭೂ ಸುಧಾರಣೆ (ಎಲ್ ಆರ್ ಎಫ್)
3) ಭೂ ಸ್ವಾಧೀನ (ಎಲ್ ಎ ಕ್ಯೂ)
4) ಲೆಕ್ಕ ಶಾಖೆ (ಎ.ಸಿ.ಟಿ)
5) ಹಕ್ಕು ದಾಖಲೆ (ಆರ್ ಆರ್ ಟಿ)
6) ಸಿಬ್ಬಂದಿ ಶಾಖೆ (ಇ ಎಸ್ ಟಿ)
7) ನಗರ ಭೂ ಪರಿಮಿತಿ (ಯುಎಲ್ ಸಿ)

8) ಅಭಿಲೇಖಾಲಯ (ಆರ್ ಕೆ ಎಲ್)
9) ಭೂ ಪರಿವರ್ತನೆ (ಎಲ್ ಎನ್)
10) ಸ್ವಾತಂತ್ರ್ಯ ಹೋರಾಟಗಾರರ ಗೌರವಧನ (ಎಫ್ ಎಫ್ ಸಿ)
11) ಚುನಾವಣೆ (ಇ ಎಲ್ ಎನ್)
12) ಆಡಳಿತ (ಎಡಿಎಂ)
13) ಮೆಜಿಸ್ಟಿರಿಯಲ್ ಶಾಖೆ (ಎಂಎಜಿ)
14) ಕರ್ನಾಟಕ ಪರಿಶಿಷ್ಟ ಜಾತಿ/ವರ್ಗಗಳ ಪರಭಾರೆ ನಿಷೇಧ (ಪಿಟಿಸಿಎಲ್)
15) ಕರ್ನಾಟಕ ಗ್ರಾಮ ರದ್ದಿಯಾತಿ ಕಾಯ್ದೆ (ಹೆಚ್ ಒ ಎ)
16) ನೀರಾವರಿ (ಐಆರ್ ಆರ್)
17) ಅರಣ್ಯ (ಎಫ್ ಒ ಆರ್)
18) ಸಾಲ್ವೆನ್ಸಿ (ಎಸ್ ಒ ಎಲ್)
19) ಸೋಲೇಷಿಯಂ ಫಂಡ್ (ಎಸ್ ಎಫ್ ಎಸ್)
20) ಮಿಸಲೇನಿಯಸ್ (ಎಂಎಸ್ ಸಿ)
21) ಸಾರ್ವಜನಿಕ ಕುಂದು ಕೊರತೆ (ಸಿ ಎಂ ಪಿ)
22) ಪ್ರಾಕೃತಿಕ ವಿಕೋಪ ( ಸಿ ಎ ಎಲ್ )
23) ಜನಗಣತಿ ಜಾನುವಾರು ಗಣತಿ ( ಸಿ ಇ ಎನ್)
24) ಇನಾಂ ರದ್ದಿಯಾತಿ ತಸ್ತೀಕು ( ಐ ಎನ್ ಎ)
25) ಪಿಂಚಣಿ (ಪಿ ಇ ಎನ್)

**ಕಛೇರಿ ಪ್ರಕಾರ್ಯಗಳ ನಿರ್ವಹಣೆಗೆ ರೂಪಿಸುವ ಸೂತ್ರಗಳು**

1) ತಹಶೀಲ್ದಾರರ ಕಛೇರಿಯಲ್ಲಿ ಸ್ವೀಕರಿಸಲಾಗದ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ದಾಖಲಿಸಿ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಕಲ್ಪಿಸಲಾಗಿದೆ.ಪ್ರಕೃತ ಕನಿಷ್ಟ ಕಾಗದ ಕಛೇರಿ ವ್ಯವಸ್ಥೆ ಜ್ಯಾರಿಯಾಗಲಿದ್ದು ಟಪಾಲುಗಳನ್ನು ಕಂಪ್ಯೂಟರ್ನಲ್ಲಿ ಸ್ಕ್ಯಾನ್ ಮಾಡಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ನೀಡಲಾಗುತ್ತಿದೆ. ಮತ್ತು ಫೈಲು ಟಪ್ಪಾಲುಗಳ ನಿರ್ವಹಣೆಯನ್ನು ಕಂಪ್ಯೂಟರ್ ಮುಖಾಂತರ ಚಾಲನೆಗೊಳಿಸಲಾಗುತ್ತಿದೆ.

2) ಸಾರ್ವಜನಿಕರಿಂದ ಸ್ವೀಕರಿಸಲಾಗುವ ಕಾಗದ ಪತ್ರಗಳಿಗೆ ಸ್ವೀಕೃತಿ ನೀಡುವುದಲ್ಲದೆ ಕಾರ್ಯಗತ ಅವಧಿ ನಿಗಧಿಪಡಿಸಿ ತಿಳಿಸಲಾಗುತ್ತಿದೆ.

3) ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆ ಬಗ್ಗೆ ಸ್ವೀಕರಿಸಲಾಗುವ ಎಲ್ಲಾ ಮನವಿಗಳನ್ನು ಪ್ರತ್ಯೇಕ ರಿಜಿಸ್ಟರ್ ನಲ್ಲಿ ನಮೂದಿಸಿ ಕ್ಲಪ್ತ ಕಾಲದಲ್ಲಿ ಉತ್ತರ ನೀಡುವುದು.

ಅಧೀನ ಕಛೇರಿಗಳಿಂದ ವರದಿ ಪಡೆಯಲು ಕಾಲಾವಧಿ ನಿಗಧಿಪಡಿಸುವುದು. ಇಲಾಖೆಯ ಪ್ರಕಾರ್ಯಗಳ ಪ್ರಗತಿ ಪರಿಶೀಲಿಸಲು ಪ್ರತಿ ಮಾಹೆಯಲ್ಲಿ ಕಂದಾಯ ಇಲಾಖಾ ಸಿಬ್ಬಂದಿಗಳ ಸಭೆಯನ್ನು ಏರ್ಪಡಿಸುವುದು.

ಕಛೇರಿ ಕೈಪಿಡಿ ನಿಯಮಾವಳಿ ರೀತ್ಯಾ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರು ಸ್ವೀಕರಿಸಿ ಗರಿಷ್ಟ 5 ದಿನಗಳೊಳಗಾಗಿ ವಿಷಯನಿರ್ವಾಹಕರು ಎಲ್ಲಾ ಸ್ವೀಕರಿಸುವ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರ ದಿನಚರಿಯಲ್ಲಿ ನಮೂದಿಸಿಕೊಂಡು ತದ ನಂತರ ವಿಷಯ ವಹಿಯಲ್ಲಿ ಅನುಕ್ರಮವಾಗಿ ನೋಂದಾಯಿಸಿಕೊಂಡು ಕಡತಗಳಲ್ಲಿ ಟಿಪ್ಪಣಿ ಹಾಕಿ ಮಂಡಿಸುತ್ತಾರೆ. ವಿಷಯ ನಿರ್ವಾಹಕರೆಲ್ಲರೂ ಕಛೇರಿ ಕಾರ್ಯವಿಧಾನದ ರೀತ್ಯ ಐದು ಕಟ್ಟು ವಿಧಾನ ಅಳವಡಿಸಿ ಕಾರ್ಯನಿರ್ವಹಿಸುತ್ತಾರೆ.

**III)** (1) **ಕಾರ್ಯಲಯದ ಸಿಬ್ಬಂದಿಗಳ ಸಂಕಲನ ಕರ್ತವ್ಯ ನಿರ್ವಹಣೆಗಳು ಸಿಬ್ಬಂದಿ ಸಂಕಲನ ಶಿಸ್ತಿನ ಕ್ರಮ ಕಾರ್ಯ ನಿರ್ವಹಣೆ**

(2) ಕಾಗದ ಪತ್ರಗಳ ಸ್ವೀಕೃತಿ ವಿಲೇವಾರಿ : ಸಾರ್ವಜನಿಕ ರಿಂದ ಅಧೀನ ಕಛೇರಿಗಳಿಂದ ಮತ್ತು ಸರ್ಕಾರದಿಂದ ಹಾಗೂ ಮೇಲಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಕಾಡುಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಾರ್ವಜನಿಕರ ಮನವಿ ಬಗ್ಗೆ ಸ್ಥಳದಲ್ಲೇ ಸ್ವೀಕೃತಿ ಪತ್ರವನ್ನು ನೀಡಿ ನಂತರ ಚುನಾವಣೆ ಸಿಬ್ಬಂದಿ/ವ್ಯವಸ್ಥಾಪಕ/ಸಹಾಯಕರ ಮುಖಾಂತರ ತಹಶೀಲ್ದಾರರ ಗಮನಕ್ಕೆ ತಂದು ಸ್ವೀಕೃತಿ ಶಾಖೆಯಲ್ಲಿ ನೋಂದಣಿ ಮಾಡಿ ಸಂಬಂಧಪಟ್ಟ ವಿಷಯನಿರ್ವಾಹಕರಿಗೆ ಪ್ರತಿ ಕಡತ/ಕಾಗದಪತ್ರಗಳನ್ನು ಶಾಖೇವಾರು ಗುರುತಿಸುವಂತೆ ಹಾಕಿದ ನಂತರ ಅಗತ್ಯ ಕ್ರಮ ಕೈಗೊಳ್ಳಲು ನೀಡಲಾಗುತ್ತದೆ.

